


ಮನೋರಮಾ :—ಅದೋ! ನನ್ನ ಪ್ರಿಯಕರನು ಹಿತ್ತಲ ಬಾಕಿಲ ಬಾರಿಸುತ್ತಲಿದ್ದಾನೆ. [ಪುಟ ೪೪

ಗದಗ ಶ್ರೀ ದತ್ತಾತ್ರಯ ಕಂಪನಿಯ
ಒಡೆಯರಾದ ಶ್ರೀಮಾನ, ಗರುಡ
ಸದಾಶಿವರಾಯರಿಂದ ರಚಿತ
ವಾದ ಸಚಿತ್ರ ನಾಟಕ
ಪುಸ್ತಕಗಳು.

೧. ಕಬೀರದಾಸ.

೨. ವಿಷಮವಿವಾಹ.

೩. ಪಾದುಕಾ ಪಟ್ಟಾಭಿಷೇಕ.

೪. ಮಾತೃಬಂಧವಿಮೋಚನ ಅಥವಾ
ಕಂಸವಧ.

೫. ಚವತಿಚಂದ್ರ.

೬. ಎಚ್ಚಮನಾಯಕ.

೭. ಸತ್ಯಸಂಕಲ್ಪ.

ಪ್ರತಿಯೊಂದಕ್ಕೆ ೧ ರೂ. ಬೆಲೆ. ವ್ಹಿ. ಪಿ.
ಖರ್ಚು ಬೇರೆ.

ದೊರೆಯುವ ವಿಳಾಸ :—

ಕಂಪನಿಯಲ್ಲಿ ಮತ್ತು
ಎ. ಆರ್. ಶಿವನಾಗಪ್ಪಾ ವಾಗ್ವಿಲಾಸ
ಬುಕ್ಕ ಡಿಪೋ, ಹುಬ್ಬಳ್ಳಿ.

॥ ಶ್ರೀ ದತ್ತರಾಜ ಸಮರ್ಥ ॥

# ಸತ್ಯಸಂಕಲ್ಪ

## ನಾಟಕವು



**ಎಚ್ಚರಿಕೆ**

ಬರಹಮೂಲಕವಾಗಿ ನಮ್ಮ ಒಪ್ಪಿಗೆಯನ್ನು ಪಡೆಯದೆ ಈ “ಸತ್ಯಸಂಕಲ್ಪ” ನಾಟಕದ ಪ್ರಯೋಗವನ್ನು ಮಾಡುವವರು ನಮ್ಮ ಸ್ವಾಮಿತ್ವದ ಅತಿಕ್ರಮಣ ಮಾಡಿದ ತಪ್ಪಿತಕ್ಕಾಗಿ ಕ್ರಿಮಿನಲ್ ಖಟ್ಲೆಗೆ ಒಳಪಡಿಸಲಾಗುವರಲ್ಲದೆ ಸಿವ್ಹಿಲ್ ಕೋರ್ಟಿನ ಮುಖಾಂತರ ಹಾನಿಯನ್ನು ತುಂಬಿಕೊಡಲಿಕ್ಕೂ ಹೊಣೆಗಾರರಾಗುವರು.

ಧಾರವಾಡ,
ತಾ. ೩—೯—೩೩

ಗರುಡ ಸದಾಶಿವರಾಯರು
ಕರ್ನಾಟಕ ನಾಟಕಾಲಂಕಾರ, ಅಭಿನಯ…

೧೯೩೩.

೨೦೦೦ ಪ್ರತಿಗಳು.



**ಬೆಲೆ ೧ ರೂಪಾಯಿ**

# ಪಾತ್ರಗಳ ವಿವರ.

**ಆಪ್ಪಾಜಿ**— ಮಹಾತ್ಮಾಜಿಯವರು.

**ಹಿರಣ್ಯಗರ್ಭಾಚಾರ್ಯರು**— ವೈಷ್ಣವ ಬ್ರಾಹ್ಮಣರು.

**ನಾಗಾಭಟ್ಟ**-- ಸ್ಮಾರ್ತ ಬ್ರಾಹ್ಮಣರು. ಹಿ. ಗರ್ಭಾಚಾರ್ಯರ ಮಿತ್ರರು ಮತ್ತು ಬೀಗರು.

**ಪದ್ಮನಾಭಾಚಾರ್ಯರು**— ಹಿ|| ಗರ್ಭಾಚಾರ್ಯರ ಮಗ. ವರ್ಕಶಾಪಿನಲ್ಲಿ ನೌಕರನಾಗಿದ್ದವ.

**ಭಗೀರಥ**— ನಾಗಾಭಟ್ಟರ ಮಗ. ಕಾಲೇಜಕ್ಕೆ ಶರಣುಹೊಡೆದವ. ದಾಂಭಿಕ ದೇಶಭಕ್ತ.

**ಮಾಧವರಾಯ**— ಊರ ಜಾಹಗೀರದಾರ. ಪುನರ್ವಿವಾಹ ಮಾಡಿ ಕೊಂಡವ.

**ಕುಮಾರ**— ಮಾಧವರಾಯರ ಪುನರ್ವಿವಾಹಿತ ಪತ್ನಿಯಲ್ಲಿ ಹುಟ್ಟಿದ ಮಗ.

**ರಮಾಬಾಯಿ**— ಹಿ|| ಗರ್ಭಾಚಾರ್ಯರ ಹೆಂಡತಿ.

**ಶಾರದಾ**— ಹಿ|| ಗರ್ಭಾಚಾರ್ಯರ ಮಗಳು. ಮಾಧವರಾಯರ ಪುನರ್ವಿವಾಹಿತ ಪತ್ನಿ.

**ರಾಧಾಬಾಯಿ**— ನಾಗಾಭಟ್ಟರ ಮಗಳು. ಪದ್ಮನಾಭಾಚಾರ್ಯರ ಪತ್ನಿ.

**ಕಮಲಾ**— ರಾಧಾಬಾಯಿಯ ಮಗಳು.

**ಮನೋರಮಾ**— ಮಾಧವರಾಯರ ಪತ್ನಿ. ಆಧುನಿಕ ಪದ್ಧತಿಯ ಶಿಕ್ಷಣ ಪಡೆದವಳು.

**ಮಾರ, ಬೀರ**— ಹರಿಜನ ಬಂಧುಗಳು.

# ಮುನ್ನುಡಿ

ಬಾಲವಿವಾಹವು ನಮ್ಮ ದೇಶದಲ್ಲಿ ಮೊದಲು ಪ್ರಚಾರದಲ್ಲಿರಲಿಲ್ಲವೆಂಬದು ಎಲ್ಲರಿಗೂ ವಿದಿತವಾಗಿಯೇ ಇದೆ. ಹಾಗೆಯೇ ರಾಷ್ಟ್ರವು ಧನಕನಕಸಂಪನ್ನವಾಗಿ ಸಮೃದ್ಧಿಸ್ಥಿತಿಯಲ್ಲಿದ್ದಾಗ್ಗೆ ಅಕಾಲಮರಣವೂ ಇದ್ದಿಲ್ಲವೆಂಬುದಕ್ಕೆ ಅನುಮಾನವೇ ಇಲ್ಲ. ಇಂಥ ಸ್ಥಿತಿಯಲ್ಲಿ ಬಾಲವಿಧವೆಯರೆಂಬುವರು ಕಣ್ಣಿಗೆ ಕಾಣುವದೇ ದುಸ್ತರವಾಗಿತ್ತು. ದೇಶದ ಆಧ್ಯಾತ್ಮಿಕ ಹಾಗು ಆಧಿಭೌತಿಕ ಸ್ಥಿತಿಗಳಲ್ಲಿ ವ್ಯತ್ಯಾಸವಾಗಿ ಸಮಾಜವು ಅಧಃಪಾತವನ್ನು ಹೊಂದುತ್ತ ನಡೆದ ಹಾಗೆ ಬಾಲವಿವಾಹದ ಪದ್ಧತಿಯೂ ರೂಢವಾಯಿತು; ಅಕಾಲಮರಣವೂ ದುತ್ತೆಂದು ಮುಂದೆ ಬಂದು ರಾಷ್ಟ್ರವನ್ನು ವ್ಯಾಪಿಸಿ-ತಾಂಡವ ನೃತ್ಯವನ್ನಾಡಹತ್ತಿತು. ನೂರಿನ್ನೂರು ವರ್ಷಗಳ ದೇಹದಾರ್ಢ್ಯದ ಬಾಳಿಕೆಯನ್ನು ಸುಖವಾಗಿ ಉಪಭೋಗಿಸುತ್ತಿದ್ದ ನಮ್ಮ ಪೂರ್ವಜರ ಕಾಲಕ್ಕೆ ವಿಧವಾ ಪುನರ್ವಿವಾಹದ ವಿಚಾರಕ್ಕೆ ಆಸ್ಪದವೇ ಇಲ್ಲದಾಗಿದ್ದರೆ ಆಶ್ಚರ್ಯದ ಮಾತಲ್ಲ. ಹೀಗಿದ್ದರೂ "ಗಂಡನು ದೀರ್ಘಕಾಲದ ವರೆಗೆ ಇಲ್ಲದಾದರೆ, ಮೃತನಾದರೆ, ಸನ್ಯಾಸಿಯಾದರೆ, ಪುಂಸ್ತ್ವಹೀನನಾದರೆ, ಧಾರ್ಮಿಕ ನೈತಿಕ ದೃಷ್ಟಿಯಿಂದ ಪತಿತನಾದರೆ, ಇಂಥ ಆಪತ್ತುಗಳಲ್ಲಿ ತೊಡಕಿದ ಹೆಂಗಸು ಬೇರೆ ಗಂಡನನ್ನು ಮಾಡಿಕೊಳ್ಳಬಹುದು" ಎಂಬ ಸ್ಮೃತಿ ವಚನವು ನಮ್ಮ ಧರ್ಮಗ್ರಂಥಗಳಲ್ಲಿ ದೊರೆಯುತ್ತಿರುವ ಮೂಲಕ ಹಿಂದೂ ಒಂದು ಕಾಲಕ್ಕೆ "ವಿಧವಾ" ಪುನರ್ವಿವಾಹದ ವಿಷಯವಾಗಿ ಸಮಾಜದ ಮುಖಂಡರು ಅಖಂಡ ವಿಚಾರಮಗ್ನರಾಗಿರಬೇಕೆಂಬದು ಸ್ಪಷ್ಟವಾಗುತ್ತದೆ. ಆದದರಿಂದ ಈಗ ವಿಶೇಷವಾಗಿ ಚರ್ಚಿತವಾಗಿ ಅಲ್ಪಸ್ವಲ್ಪ ಪ್ರಚಾರದಲ್ಲಿಯೂ ಬರುತ್ತ ನಡೆದಿರುವ ಈ ರೂಢಿಯು ಕೇವಲ ಪಾಶ್ಚಿಮಾತ್ಯರ ಸ್ವೈರ ವಿಚಾರ ವಿಹಾರಗಳ ಅಂಧಾನುಕರಣದ ಪರಿಣಾಮವೆಂಬ ಪ್ರವಾದವು ಸತ್ಯವಾದದ್ದಲ್ಲವೆಂದು ಹೇಳಲಿಕ್ಕೆ ಅಡ್ಡಿಯೇನು ?

ಮೊದಲಿನ ಕಾಲದ ದೀರ್ಘಜೀವಿತ್ವದ ಬಾಳು ಹಾಳಾಗಿ ಹೋಗಿ ಸಮಾಜವೇ ಅಲ್ಪ ಜೀವಿಯಾಗಿರುವ ಈಗಿನ ಮನ್ವಂತರದಲ್ಲಿ ಬಾಲವಿಧವೆಯರ ಸಂಖ್ಯೆಯು ದಿನದಿನಕ್ಕೆ ಹೆಚ್ಚಾಗುತ್ತ ನಡೆದಿರುವದು ಆಶ್ಚರ್ಯದ ಸಂಗತಿಯಲ್ಲ. ಆದರೆ

ಅಲ್ಪ ವಯಸ್ಸಿನಲ್ಲಿಯೇ ವೈಧವ್ಯದ ದಾರುಣವಾದ ಕಷ್ಟಕ್ಕೆ ಗುರಿಯಾದ ಆ ಬಡ ಜೀವಿಗಳ ಕಷ್ಟನಿವಾರಣೆಯ ಉಪಾಯವನ್ನು ಸಮಾಜವು ಯಾವ ವಿಧವಾಗಿಯೂ ಕೈಕೊಳ್ಳದಿರುವದು ಮಾತ್ರ ಆಶ್ಚರ್ಯವಾಗಿದೆ! ಅಥವಾ ಒಬ್ಬ ಹೆಂಡತಿಯು ಸತ್ತ ೧೪ ದಿನಗಳೊಳಗಾಗಿಯೇ ಮತ್ತೊಬ್ಬ ಅಲ್ಪವಯಸ್ಕ ಬಾಲಿಕೆಯನ್ನು ಮದುವೆಯಾಗುವ ಶಾಸ್ತ್ರೀಯ ಸಮ್ಮತಿಯು ನಮ್ಮೊಳಗಿನ ೬೦ ವರ್ಷಗಳ "ತರುಣ" ಗಂಡಸರಿಗಿರುವಾಗ ಪುರುಷ ಪ್ರಾಬಲ್ಯಮಯವಾಗಿರುವ ನಮ್ಮ ಸಮಾಜವು ಅತ್ತ ಕಡೆಗೇಕೆ ಲಕ್ಷವನ್ನು ಪೂರೈಸಬೇಕು? "ಮಹದಪಿ ಪರದುಃಖಂ ಶೀತಲಂ ಸಮ್ಯಗಾಹುಃ" ಎಂಬ ಮಹಾಕವಿವಾಕ್ಯದಂತೆ ಹೆರವರ ದುಃಖದಿಂದ ತನಗಾಗುವ ತಾಪವೇನು? ಆದರೆ ಈ ಬಗೆಯ ಔದಾಸೀನ್ಯವೂ ಕರ್ತವ್ಯಪರಾಙ್ಮುಖತೆಯೂ ಅಕ್ಷಮ್ಯ ಅಪರಾಧವೆಂದು ವಿವೇಕವು ಹೇಳದಿರದು. ತಾನು ಮಾಡುವ ಈ ತಪ್ಪಿಗಾಗಿ ದಿಕ್ಕಿಲ್ಲದ ಬಡಧೇನುಗಳ ನಿಂದೆಯನ್ನು ನಿಷ್ಕಾರಣವಾಗಿ ನಿರ್ಭಯವಾಗಿ ಮಾಡುವದಕ್ಕೂ ಈಗಿನ ಸಮಾಜರಾಕ್ಷಸವು ಹೆದರಿ ಹಿಂದೆಗೆಯುವದಿಲ್ಲ! ಇದನ್ನು ನೋಡುವದು ಸಮಬುದ್ಧಿಗೆ ಹೇಗೆ ಸಹನವಾದೀತು?

ಒಂದು ಸಲ ನಾವು ಶಿರಸಿಯ ಶ್ರೀ ಮಾರಿಕಾಂಬೆಯ ಜಾತ್ರೆಗೆ ಹೋಗಿದ್ದೆವು. ಅಲ್ಲಿ ಪರಸಿಯಲ್ಲಿ ಒಬ್ಬೊಬ್ಬ ಬ್ರಾಹ್ಮಣರು ಐದಾರು ಜನ ಬಾಲವಿಧವೆಯರೊಂದಿಗೆ ಬಂದದ್ದು ನಾವು ಕಣ್ಣಾರೆ ಕಂಡ ಮಾತು. ಅವರಲ್ಲಿ ಇಪ್ಪತ್ತು ಇಪ್ಪತ್ತೈದು ವರ್ಷದೊಳಗಿನ ವಯಸ್ಸಿನವರು ನೂರಕ್ಕೆ ತೊಂಬತ್ತೈದರಷ್ಟು ಜನ; ಮಿಕ್ಕವರು ಹತ್ತು ಹನ್ನೆರಡು ವರ್ಷದ ಎಳೆ ಪ್ರಾಯದ ಹೆಣ್ಣುಮಕ್ಕಳು! ಎಲ್ಲರೂ ಮುಂಡನ ಮಾಡಿಸಿದವರಾಗಿದ್ದರು! ಮನೋವಿಕಾರಗಳ ಹೊಡತದಿಂದ, ದಿಕ್ಕು ತಪ್ಪಿ ಬೆದರಿದ ಹುಲ್ಲೆ ಮರಿಗಳಂತಹ ಆ ದೀನ ಮುದ್ರೆಗಳನ್ನು ನೋಡಿ ದುಃಖವು ತುಂಬಿ ಬಾರದ ಕಲ್ಲೆದೆಯು ಯಾರಿಗಾದರೂ ಇದ್ದೀತೆ? ಆಗಿನಿಂದ "ಸನಾತನ ಧರ್ಮದ ಹೆಸರಿನ ಹೆಮ್ಮೆಯಿಂದ ಎದೆಯುಬ್ಬಿಸಿಕೊಂಡು ಮೆರೆಯುವ ಸಮಾಜವೇ, ನಿನ್ನಡಿಯ ಬುಡದಲ್ಲಿ ನೆಲವೆಲ್ಲ ಪೊಳ್ಳಾಗಿ ಗಭೀರವಾದ ಕೊಳ್ಳವಾಗಿರುವದನ್ನು ನೀನು ಅರಿಯದೆ ಹೀಗೆ ಎಚ್ಚರದಪ್ಪಿ ನಡೆಯುವದಾದರೆ ನಿಶ್ಚಯವಾಗಿಯೂ ತಿರುಗೇಳಲು ಬಾರದಂತೆ ಕುಸಿದು ಮಣ್ಣುಪಾಲಾಗುವೆ; ಚಲವನ್ನು ಬಿಟ್ಟು ಸಕಾಲಕ್ಕೆ ಸಾವಧಾನನಾಗು! ಸಾವಧಾನವಾಗು!!" ಎಂಬಂತೆ

ಆವುದೋ ಒಂದು ದಿವ್ಯ ವಾಣಿಯು ನಮ್ಮ ಸಮಾಜವನ್ನೆಚ್ಚರಿಸುತ್ತಿರುವಂತೆ ನಮಗೆ ಇಂದಿಗೂ ಭಾಸವಾಗುತ್ತಲಿದೆ.

ಮಾರಿಕಾಂಬೆಗೆ ಲಕ್ಷಾವಧಿ ಕುರಿಗಳನ್ನೆಳೆದೆಳೆನು ಬಲಿಗೊಡುವದೊಂದು ಪಾಠವನ್ನು ಧರ್ಮವು ಅಲ್ಲಿ ಹೇಳಿ ಬಿಟ್ಟಿದೆಯಂತೆ! ಗ್ರಾಮದೇವತೆಗೆ ಹೀಗೆ ಮೂಕ ಪ್ರಾಣಿಗಳನ್ನು ಬಲಿಗೊಡುವ ಸಾಂಪ್ರದಾಯವು ಊರೂರಿಗೂ ಇದ್ದದ್ದೇ ಸರಿ! ಅದಕ್ಕಾಗಿ 'ಭಕ್ತರು' ಎಷ್ಟೋ ಕುರಿಕೋಣಗಳನ್ನು ಜಗನ್ಮಾತೆಗೆ ಬಲಿಯಾಗಿ ಸಮರ್ಪಿಸಿ ನೈವೇದ್ಯ ಹಿಡಿಯುವದೂ ಉಂಟು. ದೇವತೆಯೇನೋ ಆ ಬಲಿಗಳನ್ನು ತಾನು ತಿನ್ನುವದಿಲ್ಲ; ಆದರೆ ಆ ಬಲಿಯಾದ ಪ್ರಾಣಿಗಳ ಮಾಂಸವನ್ನು ರುಚಿಕರವಾಗಿ ಬೇಯಿಸಿ ತಿನ್ನತಕ್ಕವರು ಅವಳ ಭಕ್ತರೇ! ಹೀಗೆ ನಿಷ್ಪಾಪವಾದ ಬಡ ಮೂಕ ಪ್ರಾಣಿಗಳನ್ನು ತಮ್ಮ ಇಷ್ಟ ದೇವತೆಗೆ ಬಲಿಗೊಡುವದಕ್ಕಿಂತಲೂ ಬಹು ಸಂಖ್ಯೆಯಾಗಿ ಬೆಳೆದಿರುವ ಬಾಲವಿಧವೆಯರ ಬಲಿಗೊಟ್ಟರೆ ಎಷ್ಟೊಂದು ಲಾಭವಿದೆ ನೋಡಿ! ಕುರಿಗಳ ಮಾಂಸದಂತೆ ಇವರ ಮಾಂಸವು ಜನರ ಜಠರಾಗ್ನಿಗೆ ಆಹುತಿಯಾಗುವದಿಲ್ಲಾದ್ದರಿಂದ ಅದನ್ನು ಹುಗಿದು ಬಿಟ್ಟರೆ ಭೂದೇವತೆಯು ತಿಂದು ತೃಪ್ತಳಾಗಿ ಭಕ್ತ ಜನರಿಗೆ ವಿಶೇಷ ಬಲವನ್ನು ಕೊಡುವಳು! ಕಾಯಿಕ—ವಾಚಿಕ ಮಾನಸಿಕ ತಾಪಾತಿಶಯಗಳಿಂದ ಹಗಲಿರುಳು ಬೆಂದು ಬೆಂಡಾಗುವ ಜೀವಿಗಳ ದುಃಖವನ್ನು ಅರಕ್ಷಣದಲ್ಲಿ ಕಳೆದಂತಾಗುವದು! ಇದೊಂದು ಪುಣ್ಯವಲ್ಲದೆ ಕುರಿಜಾತಿಯ ಸಲುವಾಗಿ ಮಾಡುವ ಅಮಾನುಷ ಬಲಾತ್ಕಾರವು ತಾನಾಗಿಯೇ ನಿಲ್ಲುವದೊಂದು ಶ್ರೇಯಸ್ಸು ಅನಾಯಾಸವಾಗಿ ಪವರಿಗೆ ಬೀಳುವದು! ಇದಕ್ಕೆ ಕಾನೂನುಗಳ ಅಪ್ಪಣೆಯಿಲ್ಲವಲ್ಲಾ ಎಂಬ ಅನುಮಾನ ಬರಬಹುದು! ಅವುಗಳ ಸಮ್ಮತಿಯನ್ನು ಪಡೆಯುವದು ನಮ್ಮ ಶಾಸ್ತ್ರೀ ಆಚಾರ್ಯ ಮಂಡಲಕ್ಕೇನು ಬಿಗಿಯಾದ ಸಂಗತಿಯಲ್ಲ! ವಿಧವೆಯರಿಗೆ ಆತ್ಮವಿಲ್ಲವೆಂದು ಪ್ರತಿಪಾದಿಸಿದರಾಯಿತು! ಸಮಾಜವಾದರೂ ಹಾಗೆಯೇ ಬಗೆದಿದೆ! ಆತ್ಮವಿದ್ದುದಾದರೆ ಜೀವವಿರುವದು; ಜೀವವಿದ್ದ ಬಳಿಕ ಮನಸ್ಸು; ಮನಕ್ಕೇ ವಿಕಾರಗಳು; ಆ ವಿಕಾರಗಳಲ್ಲಿ ಕೆಲವನ್ನು ಪ್ರತ್ಯಕ್ಷವಾಗಿಯೂ ಕೆಲವನ್ನು ಅಪ್ರತ್ಯಕ್ಷವಾಗಿಯೂ ಮನಸ್ಸು ತಣಿಸಿಕೊಳ್ಳದಿರದು; ಇದೇ ನಿಸರ್ಗದ ನಿಯಮವು. ಆದುದರಿಂದ ವಿಧವೆಯರಿಗೆ ಆತ್ಮವೇ ಇರುವದಿಲ್ಲವೆಂದು ಮುಕ್ತಕಂಠವಾಗಿ ಹೇಳಿ ಕಾನೂನುಗಳಿಂದ ಅವರನ್ನು ಬಲಿಗೊಡುವದಕ್ಕೆ ಸಮ್ಮತಿಯನ್ನು ಸುಲಭವಾಗಿ ಪಡೆಯಬಹುದು.

ಈಗಿನ ಬಗೆಯ ವಿಧವಾ ಧರ್ಮವನ್ನು ಯಥಾಕ್ರಮವಾಗಿ ಪಾಲಿಸುವ ಬಾಲೆಯರು ಹುಟ್ಟಿದ ಹಾಗು ಹೊಕ್ಕ ಪುನೀತನಗಳ, ಸಪ್ತ ಕುಲಗಳನ್ನು ಉದ್ಧರಿಸುವರೆಂದು ನಮ್ಮ ಶಾಸ್ತ್ರಗಳು ಸಾರುತ್ತಿವೆ. ಹೀಗಿರುವದರಿಂದ ವಿಧವಾ ಪುನರ್ವಿವಾಹಸಮ್ಮತವಿಲ್ಲದ ಸಮಾಜದ ಪೂರ್ವಿಕರೆಲ್ಲರೂ ನಿಃಸಂದೇಹವಾಗಿ ಉದ್ಧೃತರಾಗಿಯೇ ಹೋಗಿದ್ದಾರೆಂದು ಹೇಳಬೇಕು! ವಿಧವೆಯರ ಸಂಖ್ಯೆಯು ಹೆಚ್ಚಾದ ಹಾಗೆಲ್ಲ ಪರಮೇಶ್ವರನ ಭಕ್ತೋದ್ಧಾರ ಕಾರ್ಯವೂ ಹಗುರಾಗಿ ಹೋಗಿರಬಹುದು! ಯಾಕಂದರೆ ಆ ಭಾರವನ್ನೆಲ್ಲ ವಿಧವೆಯರೇ ಹೊತ್ತುಕೊಂಡಂತಾಗಿರುವದಲ್ಲವೆ? ಈಗಂತೂ ಒಂದೊಂದು ಕುಲಕ್ಕೆ ನೂರಾರು ಜನ ವಿಧವೆಯರು ಉದ್ಧಾರ ಕಾರ್ಯಕ್ಕಾಗಿ ನಿಂತೇ ಬಿಟ್ಟಿದ್ದಾರೆಂದ ಬಳಿಕ ಅವರೊಳಗಿನ ಎಷ್ಟೋ ಜನರಿಗೆ ಕೆಲಸವೇ ಇಲ್ಲದಾಗಿರಬಹುದು. ಹೀಗೆ ನಿರುದ್ಯೋಗಿಗಳಾದವರ ಸಲುವಾಗಿ ಶಾಸ್ತ್ರವು ಬೇರೆ ಯಾವ ಕೆಲಸವನ್ನು ಹುಡುಕಿ ಇಟ್ಟಿರುವದೋ ತಜ್ಞರೇ ಹೇಳಬೇಕು!

ವಿಧವಾಪುನರ್ವಿವಾಹ ಸಮರ್ಥನದಂತಹ ಅಶಾಸ್ತ್ರವಾದ ಸಾಹಸ ಬಡುವದಕ್ಕಿಂತ ವೈಧವ್ಯ ದಸೆಯಲ್ಲಿ ಸತಿ ಹೋಗುವದಕ್ಕಿಂತಲೂ ಕಠಿಣವಾದ ಸನ್ಯಾಸ ಧರ್ಮವನ್ನು ಪಾಲಿಸುವಷ್ಟು ತೀವ್ರ ವೈರಾಗ್ಯವು ಅವರಲ್ಲುಂಟಾಗುವಂತಹ ಸುಶಿಕ್ಷಣವು ಅವರಿಗೆ ದೊರೆಯುವ ಏರ್ಪಾಟು ಮಾಡಿದರೆ ನಮ್ಮ ಸಮಾಜದ ಮೇಲ್ಮೆಗೆ ಚ್ಯುತಿಯುಂಟಾಗದೆಂದು ಹಲ ಪಂಡಿತರ ಹೇಳಿಕೆ. ಈ ಹೇಳಿಕೆಯೇನೋ ಸುಲಭವಾಗಿದೆ; ಸುಂದರವಾಗಿದೆ; ಗೌರವಾಸ್ಪದವಾದದ್ದೂ ಇದೆ. ಇದನ್ನು ಯಾರಾದರೂ ಒಪ್ಪಿಕೊಳ್ಳಬಹುದು. ಆದರೆ, ವಿಧವೆಯರೆಂದರೆ ಹೊಟ್ಟೆಬಟ್ಟೆಗಳ ಮಟ್ಟಿಗೆ ಸಾಗಿದರೆ ಸಾಕಾಗಿ ಸಂಬಳವಿಲ್ಲದೆ ದುಡಿಯುವ ಜೀತದಾಳುಗಳೆಂದು ಒಗೆದಿರುವ ಈಗಿನ ಪ್ರಪಂಚದ ಬುದ್ಧಿಗೆ ಈ ಹೇಳಿಕೆಯು ನಾಟುವದು ಬಂಡೆಯ ಮೇಲೆ ಬಿತ್ತಿದ ಬೀಜದಂತೆಯೇ ಸರಿ. ಮುಂಡನ ಮಾಡಿಸಿ ಕುಂಕುಮ ಕಂಕಣಗಳನ್ನು ತೆಗೆಯಿಸಿ ಕಾವೆಯ ಬಟ್ಟೆಯನ್ನುಡಿಸಿದ ಮಾತ್ರಕ್ಕೆ ಮನವು ನಿರಿಚ್ಛವಾಗಿ ಇಂದ್ರಿಯದಮನವು ಸಾಧ್ಯವಾಗುವದೆಂದು ತಿಳಿಯುವವರನ್ನು ತಡಮಾಡದೆ ಹುಚ್ಚರ ಆಸ್ಪತ್ರೆಗೆ ಕಳಿಸಬೇಕು. ಮೇಲಾಗಿ ವಿಧವೆಯರಿಗಷ್ಟೆ ವೈರಾಗ್ಯವರ್ಧಕ ಶಿಷಣವನ್ನು ಕೊಟ್ಟು ಗಂಡಸರಿಗೆ ಸ್ವೈರವರ್ತನದ ಲೈಸನ್ಸು ಕೊಡುವ ಈಗಿನ ಶಿಕ್ಷಣಕ್ರಮವು ಅವ್ಯಾಹತ ನಡೆದುದೇ ಆದರೆ? ಒಂದೇ ಕೈಯಿಂದ ಚಪ್ಪಳೆಯು ಸಪ್ಪಳವಾಗುವದಿಲ್ಲವಲ್ಲ!

ಭ್ರೂಣಹತ್ಯಾ ಬಾಲಹತ್ಯಾದಿಗಳ ಲೆಕ್ಕವನ್ನು ಚಿತ್ರಗುಪ್ತರು ಬರೆದಿಟ್ಟಿದ್ದರೆ ಅದೆಷ್ಟು ದೊಡ್ಡದಾಗಿರುವದೋ ಏನೋ? ಅಥವಾ ಅಗಣ್ಯವಾದೀ ವಿಷಯವನ್ನು ಬರೆಯುವದನ್ನೇ ಅವರು ಬಿಟ್ಟುಕೊಟ್ಟಿರಬಹುದು. ಶಿರಸಿಯ ಮಾರಿಕಾಂಬೆಯ ಜಾತ್ರೆಯಲ್ಲಿ ನಾವು ನೋಡಿದ ನೋಟಕ್ಕಿಂತಲೂ ಸುಂದರವಾದ ನೋಟವನ್ನು ನಮ್ಮ ಸಮಾಜ ಬಂಧುಗಳು ಮಠಾಧೀಶರ ಮಹಾಸಮಾರಾಧನೆಗಳಲ್ಲಿ ಯಜ್ಞಯಾಗಾದಿ ಸಮಯದಲ್ಲಿ ಜನಸ್ತೋಮವು ಊಟಕ್ಕೆ ಕುಳಿತಾಗ್ಗೆ ನೋಡಬಹುದು. ಮುಂಡನವನ್ನು ಮಾಡಿಸಿಕೊಂಡು ಕೆಂಪು ಬಣ್ಣದ ಮದರೆಯನ್ನುಟ್ಟು ಹಣೆಗೆ ಅಂಗಾರವನ್ನೂ ಭಸ್ಮವನ್ನೂ ಬಳಿದುಕೊಂಡು ಸಾಲಾಗಿ ಕುಳಿತ ಆ ನಮ್ಮ ಸಮಾಜೋದ್ಧಾರಕ ಸೇನಾಸಮೂಹವನ್ನು ನೋಡಿದರೆ ಯಾವ ಮಾದರಿಯ ಆನಂದವಾಗುವದೆಂಬದನ್ನು ನಮ್ಮ ಧರ್ಮ ಬಂಧುಗಳೇ ನಿಶ್ಚಳವಾಗಿ ಹೇಳಿ ಬಿಡಲಿ. ಅಂದರೆ ಅದರಲ್ಲಿ ನಾವು ಕೂಡ ಭಾಗಿಗಳಾಗುವ ಸಾಹಸವನ್ನು ಮಾಡಿ ಕೆಲಮಟ್ಟಿಗಾದರೂ ಮನೋವ್ಯಥೆಯನ್ನು ಕಡಿಮೆ ಮಾಡಿಕೊಳ್ಳುವ ಪ್ರಯತ್ನ ಮಾಡಿ ನೋಡುವೆವು.

ನಮ್ಮ ಹೆಣ್ಣು ಮಕ್ಕಳನ್ನು ಪರರು ಕಣ್ಣೆತ್ತಿ ನೋಡಿದ್ದನ್ನೂ ಸಹಿಸದವರು ನಾವು. ಆದರೆ ಅವರನ್ನು ಮುಟ್ಟಿ ಮುಖ ಮುಂಡಗಳ ಮೇಲೆ ಯಥಾಸ್ಥಿತವಾಗಿ ನಿರ್ಭಯವಾಗಿ ಕೈಯಾಡಿಸಿ ದಕ್ಕಿಸಿಕೊಳ್ಳುವ ನಾಪಿತನೇ, ನೀನೇ ಧನ್ಯನು! ಎಲೋ ಭಾಗ್ಯಶಾಲಿಯೇ, ನಮ್ಮ ಶಾಸ್ತ್ರ ಪುರುಷನಿಗೆ ಯಾವ ಮಂತ್ರದಿಂದ ಮಂತ್ರಿಸಿ ಮರುಳು ಮಾಡಿ ಆತನ ಒಲುಮೆಯನ್ನು ಪಡೆದೆ?

ಕಿವಿಯೆಡೆಯಲ್ಲಿ ಅಂಗೈಯನ್ನಿರಿಸಿ ಮಲಗಿಕೊಂಡಾಗ್ಗೆ ಏನೋ ಒಂದು ಮಾದರಿಯ ಸಂಘಧ್ವನಿಯು ಕೇಳಿಸುವದಿಲ್ಲವೆ? ಅದು ರಕ್ತವಾಹಿನಿಗಳಲ್ಲಿ ವೇಗದಿಂದ ಹರಿದಾಡುವ ರಕ್ತ ಪ್ರವಾಹದೊಡನೆ ಹೊರಡುವ ವಿದ್ಯುನ್ನಾದವೆಂದು ಶಾಸ್ತ್ರಜ್ಞರು ಹೇಳುವರು. ನಮ್ಮ ಅಜ್ಜಿಯು ಅದು ಈಗಲೂ ಲಂಕೆಯಲ್ಲಿ ಸುಡುತ್ತಿರುವ ರಾವಣನ ಚಿತಾಗ್ನಿ ಜ್ವಾಲೆಯನಾದವೆಂದು ಹೇಳುತ್ತಿದ್ದಳು. ನಾವು ಮಾತ್ರ ಗರ್ಭದಿಂದ ಹೊರಬೀಳುವ ಮೊದಲೋ ಬಿದ್ದ ನಂತರದಲ್ಲಿಯೋ ಹತಿಸಲ್ಪಟ್ಟ ವಿಧವಾ ಸಂತತಿಯೂ ಅವುಗಳನ್ನು ಹೆತ್ತ ವಿಧವೆಯರೂ ಅಲ್ಲದೆ ಅವರ ಪಾತಕಕ್ಕಾಗಿ ನರಕವಾಸಕ್ಕೀಡಾದ ಅವರ ಉಭಯ ಕುಲಗಳ ಪಿತೃಗಣವೂ

ಅಲ್ಲಿಯ ಯಾತನೆಗಳನ್ನು ಸಹಿಸಲಾರದೆ ಘೋರಾಡಿ ಅಳುತ್ತಿರುವ ಸಂಘಸ್ವರವೆಂದೇ ಹೇಳುವೆವು.

ಬ್ರಹ್ಮಚರ್ಯಾಶ್ರಮದ ನಿರ್ಬಂಧಗಳನ್ನು ಯತ್ಕಿಂಚಿತ್ತಾದರೂ ಪಾಲಿಸದೆ ಚಿಕ್ಕ ವಯಸ್ಸಿನಲ್ಲಿಯೇ ಅನೇಕಾನೇಕ–ದುಶ್ಚಟಗಳನ್ನು ತಗಲಿಸಿಕೊಂಡು ಅಕಾಲ ಮೃತ್ಯುವಿಗೆ ತುತ್ತಾಗುವ ಸಿದ್ಧತೆಯನ್ನು ಮಾಡಿಕೊಂಡ ವಿವಾಹಿತ ತರುಣರೂ ಗತವಯಸ್ಕರಾಗಿ ಚಿತೆಯ ಹತ್ತರ ನಿಂತುಕೊಂಡು ಮದುವೆಯನ್ನು ಮಾಡಿಕೊಂಡ ಪಿತಾಮಹರೂ ತಮ್ಮ ಪಶ್ಚಾತ್ ತಮ್ಮ ತಮ್ಮ ಯುವತಿಯರಿಗೆ ಪುನರ್ವಿವಾಹಕ್ಕೆ ನಿಃಶಂಕವಾಗಿ ಅಪ್ಪಣೆಯನ್ನು ಕೊಟ್ಟೇ ಪ್ರಾಣಬಿಡಬೇಕೆಂದು ನಮ್ಮದೊಂದು ನಮ್ರವಾದ ಸೂಚನೆ.

ಈ ವಿಚಾರ ಪರಂಪರೆಯನ್ನನುಸರಿಸಿಯೇ ಕಾಲಕ್ಕನುಸರಿಸಿ **ಇಷ್ಟವಿದ್ದ ಬಾಲವಿಧವೆಯರಿಗೆ** ಪುನರ್ವಿವಾಹಕ್ಕೆ ಸಮ್ಮತಿಯನ್ನು ಕೊಡುವದು ಅಸಮಂಜಸವಾಗಲಾರದೆಂಬ ನಂಬಿಕೆಯಿಂದ ಹಾಗು **ಅಸ್ಪೃಶ್ಯತಾನಿವಾರಣೆಯ** ವಿಷಯವಾಗಿ ಸ್ವಲ್ಪ ಜನ ಸಾಂಪ್ರದಾಯವಾದಿಗಳನ್ನುಳಿದು ಸಕಲರೂ ಸಮ್ಮತಿಯನ್ನು ಕೊಟ್ಟಿರುವದನ್ನು ಲಕ್ಷಕ್ಕೆ ತಂದು ಈ ಎರಡೂ ಸಾಮಾಜಿಕ ತಿದ್ದುಪಡೆಯ ವಿಷಯಗಳನ್ನು ಈ "ಸತ್ಯಸಂಕಲ್ಪ" ದಲ್ಲಿ ತಕ್ಕ ಮಟ್ಟಿಗೆ ಚರ್ಚಿಸುವ ಪ್ರಯತ್ನ ಮಾಡಲಾಗಿದೆ. ಹಾಗೆಯೇ ಇದರಲ್ಲಿ ಅಸ್ಪೃಶ್ಯತೆಯ ವ್ಯಾಖ್ಯೆಯೇ ಬೇರೆಯೆಂದು ವಿವರಿಸಲು ಯತ್ನಿಸಲಾಗಿದೆ. ಈ ಯತ್ನಗಳು ಎಷ್ಟು ಮಟ್ಟಿಗೆ ಯಶಸ್ವಿಯಾಗಿ ಸಾಧಿಸಿರುವವೆಂಬುವನ್ನು ನಮ್ಮ ಕನ್ನಡ ನಾಡಿನ ವಿಚಾರವಂತ ಸಮಾಜ ಧುರೀಣರು ಪರೀಕ್ಷಿಸಿ ನೋಡಬೇಕೆಂಬುದೇ ನಮ್ಮ ಸವಿನಯ ಪ್ರಾರ್ಥನೆ.

ತೀರ ಅಲ್ಪಾವಧಿಯಲ್ಲಿ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟಿದಕ್ಕಾಗಿ ಕ. ಪ್ರಿಂ. ವರ್ಕ್ಸಿನ ಒಡೆಯರಾದ **ಶ್ರೀ. ಯಶವಂತ ಭಾಸ್ಕರ ಜಠಾರ, ಬಿ.ಎ., ಎಲೆಲ್. ಬಿ.** ಇವರಿಗೂ ಅವರಿಗೆ ಸಹಾಯಕರಾಗಿರುವ ಕೆಲಸಗಾರರಿಗೂ ಮತ್ತು ಚಿತ್ರದ ಅಚ್ಚುಗಳನ್ನು ಕೂಡ ಅತಿ ಶ್ರಮ ವಹಿಸಿ ಅಲ್ಪಕಾಲದಲ್ಲಿ ಮಾಡಿಕೊಟ್ಟ ಶ್ರೀನಿವಾಸ ಕಾರ್ಯಾಲಯದವರಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು.

**ಧಾರವಾಡ,**
ಚಾಲುಕ್ಯವಿಕ್ರಮ ವರ್ಷ ೮೫೮
ಶಾ. ಶ. ೧೮೫೫, ಭಾ. ಶು. ೧೪, ಭಾನುವಾರ

**ಗರುಡ ಸದಾಶಿವರಾಯ.**

॥ ಶ್ರೀ ದತ್ತರಾಜ ಸಮರ್ಥ ॥

# ಸತ್ಯಸಂಕಲ್ಪ

## ೧ನೆಯ ಅಂಕ

## ೧ನೆಯ ಪ್ರವೇಶ

( ಮೂರೂಸಂಜೆಯ ಸಮಯ ಊರ ಹೊರಭಾಗ. )

**ರಮಾಬಾಯಿ**-- ಸಾಯಂಕಾಲವಾಗುತ್ತ ಬಂತು! ಶಾರದೆಯು ಎತ್ತ ಹೋಗಿರಬಹುದು ? ಶಾರದೇ ಶಾರದೇ ? ನದಿಯ ಕಡೆಗೆ ಹೋದಳೆನ್ನಬೇಕೇ ! ಈ ಮುಂಚಿತವಾಗಿಯೇ ಬಟ್ಟೆಬರೆಗಳನ್ನೊಗೆದು ತಂದುಹಾಕಿದ್ದಾಳೆ. ದೇವಾಲಯಕ್ಕೆ ಪುರಾಣವನ್ನೇನಾದರೂ ಕೇಳಲಿಕ್ಕೆ ಹೋಗಿರಬಹುದೇನು ? ಹಾಗೂ ಇರಲಿಕ್ಕಿಲ್ಲ, ಯಾಕಂದರೆ, ಸಕೇಶಿ ವಿಧವೆಯಾದಿವಳನ್ನು ನೋಡಿ ಜನರು ಅಸಹ್ಯಪಟ್ಟುಕೊಳ್ಳುವರೆಂದು ಇವಳು ಅತ್ತ ಹೋಗುವದೇ ಇಲ್ಲ; ಹೀಗಿರಲು ಎತ್ತ ಹೋಗಿರಬಹುದು ? ಶಾರದೇ ಶಾರದೇ (ಎಂದು ಕೂಗುತ್ತ ಹುಡುಕುತ್ತ ಹೋಗುವಳು)

(ಅಶ್ವತ್ಥಕಟ್ಟೆ: ಸೂರ್ಯಾಸ್ತಸಮಯ, ಶಾರದಾ-ಮಾಧವರಾಯರು ಪ್ರವೇಶಿಸುವರು.)

**ಮಾಧವ**— ಶಾರದೇ, ನಾನು ಬಹಿಷ್ಕಾರಕ್ಕೆ ಹೆದರುವದಿಲ್ಲ. ಮುಪ್ಪಿನ ಮುದುಕರಿಗೆ ಎಳೇ ಹುಡುಗಿಯರನ್ನು ಕೊಟ್ಟು ಲಗ್ನಮಾಡಲಿಕ್ಕೆ ಸಮ್ಮತಿಯನ್ನು ಕೊಡುವ ಈ ಅನ್ಯಾಯೀ ಸಮಾಜದ ಬಹಿಷ್ಕಾರಕ್ಕೆ ಬೆದರೇನು ! ನಿಮ್ಮಪ್ಪನು ಹಣದಾಶೆಗಾಗಿ ನಿನ್ನನ್ನು ಆ ಎಂಬತ್ತು ವರುಷದ ಭುಜಂಗ ಸರಾಫನೆಂಬ ಹೆಣಕ್ಕೆ ಕೊಟ್ಟು ಲಗ್ನಮಾಡದಿದ್ದರೆ ನೀನು ಇಷ್ಟು ತೀವ್ರ ವಿಧವೆಯಾಗು

ತ್ತಿರಲಿಲ್ಲ. ನಿನ್ನ ವೈಧವ್ಯಕ್ಕೆ ನಿನ್ನ ತಾಯಿ-ತಂದೆಗಳು ಮತ್ತು ಆ ನಿನ್ನ ಕಾಮಾಂಧ ಮುದುಕ ಮೃತಪತಿಯೇ ಕಾರಣರು. ಅವರು ಮಾಡಿದ ಪಾಪಕ್ಕೆ ನೀನೇಕೆ ಪ್ರಾಯಶ್ಚಿತ್ತ ಹೊಂದುವದು ? ಸುಖವಾಗಿ ಪುನರ್ವಿವಾಹವನ್ನು ಮಾಡಿ ಕೊಂಡು ಧರ್ಮದಿಂದಿದ್ದು ಮಾನವ ಜನ್ಮವನ್ನು ಸಾರ್ಥಕವಮಾಡಿಕೊಳ್ಳುವಿಯಂತೆ.

**ಶಾರದಾ**— ಆಗಲಿ, ಪುನರ್ವಿವಾಹವಾದಮೇಲೆ ಮುಂದಿನ ವಿಚಾರ.

**ಮಾಧವ**— ಶಾರದೇ ಈಗ್ಗೆ ನಮ್ಮ ನಿಮ್ಮ ವಿವಾಹವು ವಿಧ್ಯುಕ್ತವಾಗಿ ಆಗದಿದ್ದರೂ ಅದು ಮನಸ್ಸಿನಿಂದ ಆಗಿಯೇ ಹೋಗಿದೆ. ಹೀಗಿರಲು ಸಂಕೋಚ ವೇಕೆ ?

**ಶಾರದಾ**— ಸಂಕೋಚವೇನೂ ಇಲ್ಲ ! ಆದರೇ,

**ಮಾಧವ**— ಮತ್ತೇನು ಅನುಮಾನ ?

**ಶಾರದಾ**— ತಾವು ಇಷ್ಟು ಆತುರಪಡುವದೇಕೆ ? ಪುನರ್ವಿವಾಹವಾದ ಮೇಲೆ ನಾನು ತಮ್ಮವಳೇ ಅಲ್ಲವೇ ?

**ಮಾಧವ**— ಇನ್ನೂ ಆಗಿಲ್ಲವೇನು ? ಶಾರದೇ ಹೀಗೆ ನನ್ನನ್ನು ವಂಚಿಸ ಬೇಡ. ನಾನು ಸರ್ವಸ್ವಿ ನಿನ್ನವನಾಗಿ ಬಿಟ್ಟಿದ್ದೇನೆ. ನನ್ನ ಹೃದಯ ಮಂದಿರ ದಲ್ಲಿರುವ ನಿನ್ನನ್ನು ಅಲ್ಲಿಂದ ಹೊರತೆಗೆಯುವ ಸಾಮರ್ಥ್ಯವು ಯಾರಿಗೂ ಬಾರದು. ನೀನು ನನ್ನ ಧರ್ಮ ಪತ್ನಿಯು. ಇದೋ ಈ ಅಷ್ಟು ದಿಕ್ಕುಗಳೂ ಪಂಚಮಹಾ ಭೂತಗಳೂ ಆ ಅಸ್ತಂಗತನಾಗುವ ಸೂರ್ಯನಾರಾಯಣನೂ ಇವರುಗಳ ಸಾಕ್ಷಿಯಾಗಿ ನಿನ್ನನ್ನು ವೈಧವ್ಯನರಕದಿಂದ ಮುಕ್ತಮಾಡುವದಕ್ಕೆ ಈ ಮಾಧವನು ನಿನ್ನ ಪಾಣಿಗ್ರಹಣ ಮಾಡುವನು. (ಆಲಂಗಿಸುವನು.)

(ಅಷ್ಟರಲ್ಲಿಯೇ ಒಂದು ಬದಿಯಿಂದ ರಮಾಬಾಯಿಯು ಬರುವಳು, ಅದನ್ನು ನೋಡಿ ಮಾಧವರಾಯನು ಓಡಿ ಹೋಗುವನು.)

**ರಮಾಬಾಯಿ**— ಶಾರದೇ, ಇದೇನನರ್ಥವೇ ? ಆ ಓಡಿಹೋದ ತರುಣ ನಾರೇ ! ಏಕೆ ? ಹೇಳುವದಿಲ್ಲವೇ ? ಎಲ್ಲ ಸಮಾಚಾರಗಳನ್ನು ಹೇಳದಿದ್ದರೆ ನಿನಗೆ ನನ್ನಾಣೆಯಿದೆ.



ಮಾಧವರಾಯ.   ಶಾರದಾ.   ರಮಾಬಾಯಿ.

ರಮಾಬಾಯಿ:— ಶಾರದೆ, ಇದೇನನರ್ಥವೆ ?   [ಪುಟ ೨.

**ಶಾರದಾ**— ಅಮ್ಮಾ ಆಣೆಯೇಕೆ ಶೂಲಿಯೇಕೆ ? ಆತನು ನನ್ನನ್ನು ಪುನರ್ವಿವಾಹ ಮಾಡಿಕೊಂಡ ಪತಿಯು.

**ರಮಾ**— ಪುನರ್ವಿವಾಹ !

**ಶಾರದಾ**— ಅಹುದು ಪುನರ್ವಿವಾಹ. ಅಮ್ಮಾ ದೇಶದಲ್ಲಿ ಅನೇಕ ಹೆಣ್ಣು ಮಕ್ಕಳು ಮಾಡಿಕೊಂಡಿಲ್ಲವೇ ? ಅದರಂತೆ ಪುನರ್ವಿವಾಹ.

**ರಮಾ**— ಆಯಿತಾಯಿತು ? ನಮ್ಮ ಮುಖಗಳಿಗೆ ನೀನು ಚನ್ನಾಗಿ ಮಸಿಯನ್ನು ಬಳಿಯುವಿ, ತಾಯೀ ದಯಮಾಡಿ ಇಂತಹ ಘಾತಕ ವಿಚಾರವನ್ನು ಮಾಡಬೇಡ, ನಮ್ಮ ಮನೆತನವೆಂತಹದು ? ನಿನ್ನ ಹಡೆದವರ ಲೌಕಿಕವೆಂತಹದು ? ಇವನ್ನೆಲ್ಲ ಆಲೋಚಿಸು.

**ಶಾರದಾ**— ಅಮ್ಮಾ ಎಲ್ಲವನ್ನು ಆಲೋಚಿಸಿ ವಿಚಾರದಿಂದ ಪುನರ್ವಿವಾಹವನ್ನು ಮಾಡಿಕೊಂಡೆನು.

**ರಮಾ**— ಅಯ್ಯೋ ! ನಿನ್ನ ಮಾತುಗಳನ್ನು ಕೇಳಿ ನನಗೆ ನಡುಗು ಹುಟ್ಟಿತಮ್ಮಾ.

**ಶಾರದಾ**— ಸುಳ್ಳು. ಆ ಹೆಣದಕೂಡ ನನ್ನ ಲಗ್ನ ಮಾಡುವಾಗ್ಗೆ ನಡುಗದವಳು ಈಗ್ಗೆ ಹೇಗೆ ನಡುಗುವೆ ?

**ರಮಾ**— ಅಂದರೆ ? ಅಂತಹ ಶ್ರೀಮಂತ ಭುಜಂಗನಾಯಕನ ಮನೆಯಲ್ಲಿ ನಿನ್ನನ್ನು ಸೇರಿಸಿದ್ದು ನಮ್ಮ ಅಪರಾಧವೇನು ?

**ಶಾರದಾ**— ನಾನು ಶ್ರೀಮಂತನ ಮನೆಯನ್ನು ಸೇರಿದೆನು, ಶ್ರೀಮಂತನು ಸುಡಗಾಡು ಸೇರಿದನು. ಆತನ ಶ್ರೀಮಂತಿಕೆಯು ನಿಮ್ಮ ಮನೆಯನ್ನು ಸೇರಿತು.

**ರಮಾ**— ನಿನ್ನ ದುರ್ದೈವಕ್ಕೆ ಯಾರೇನು ಮಾಡುವರು ?

**ಶಾರದಾ**— ಅದಹುದು. ಇಷ್ಟುದಿನಗಳತನಕ ದುರ್ದೈವಿಯಾಗಿದ್ದೆನು. ಈಗ್ಗೆ ಸುದೈವಿಯಾದೆನು.

**ರಮಾ**— ಅಂದರೆ ?

**ಶಾರದಾ—** ಅಂದರೇ...ವೈಧವ್ಯದಲ್ಲಿ ಕಾಲಹರಣಮಾಡುವಾಗ್ಗೆ ದುರ್ದೈವಿಯಾಗಿದ್ದೆನು, ಪುನರ್ವಿವಾಹವಾದನಂತರ ಸುದೈವಿಯಾದೆನು.

**ರಮಾ—** ಹಾಗೆ ನೀನು ಪುನರ್ವಿವಾಹವನ್ನೇ ಮಾಡಿಕೊಂಡದ್ದು ನಿಜವಾಗಿದ್ದರೆ ನಿನಗೆ ಜನ್ಮವನ್ನು ಕೊಟ್ಟವರು ಉರಲುಹಾಕಿಕೊಂಡರೆಂದೇ ತಿಳಿ.

**ಶಾರದಾ—** ಅಯ್ಯೋ ಅಮ್ಮಾ! ನಮ್ಮಪ್ಪನು ಅಷ್ಟು ಹೇಡಿಯೋ? ಛೀ. ಹೀಗೇನು ಹೇಳುವೆ! ಯಾವ ಧೈರ್ಯಶಾಲಿಯು ತನ್ನ ಹೊಟ್ಟೆಯ ಕರುಳನ್ನು ಚಿತೆಯನ್ನೇರಿದ ಮುತ್ತಾತನ ಕೊರಳಲ್ಲಿ ಹಾಕಿದನೋ ಅಂಥಾತನು ನಮ್ಮ ಪುನರ್ವಿವಾಹದ ಮಂಗಲ ಸಮಾಚಾರವನ್ನು ಕೇಳಿ ಉರಲು ಹಾಕಿಕೊಳ್ಳುವನೇ?

**ರಮಾ—** ಅದೆಲ್ಲವಿರಲಿ, ಆ ತರುಣನಾರು?

**ಶಾರದಾ—** ಅವರಾರೆನ್ನುವದು ಮುಂದೆ ತಾನಾಗಿಯೇ ತಿಳಿಯುವದು.

**ರಮಾ—** ಇಲ್ಲ, ಈಗಲೇ ಹೇಳು, ಅವನಾರು?

**ಶಾರದಾ—** ಮುಂದೆ ತಾನಾಗಿಯೇ ತಿಳಿಯುವದು. ಈಗ್ಗೆ ಹೇಳಲಾರೆ.

**ರಮಾ—** ಒಳಿತಾದ ಮಾರ್ಗವನ್ನು ಹಿಡಿದಿ ಬಹು ಘನವಂತೆ ಸಾಕು ಸಾಕು, ನಡೆ ಮನೆಗೆ (ದಬ್ಬಿಕೊಂಡು ಹೋಗುವಳು.)

---

## ೨ನೆಯ ಪ್ರವೇಶ

(ಹಿರಣ್ಯಗರ್ಭಾಚಾರ್ಯರ ಮನೆಯ ಪಡಸಾಲೆ ಅವರ ಬೀಗರಾದ ನಾಗಾಭಟ್ಟರು ಬರುವರು, ಪರಸ್ಪರ ನಮಸ್ಕಾರ ಶಿಷ್ಟಾಚಾರವಾದನಂತರ)

**ನಾಗಾಭಟ್ಟ—** ಸ್ವಾಮೀ, ಹಿರಣ್ಯಗರ್ಭಾಚಾರ್ಯರೇ, ನೋಡಿದಿರಾ, ಈ ದೇಶಭಕ್ತರು ಬರುಬರುತ್ತ ಧರ್ಮದಲ್ಲಿ ಸಹ ಕೈಹಾಕಲಾರಂಭಿಸಿದರು. ವೈದಿಕರಾದ ನಾವುಗಳು ಸುಮ್ಮನಿದ್ದರೆ ಇನ್ನು ಮೇಲೆ ಪರಿಣಾಮವಾಗುವದೇ?

**ಹಿರಣ್ಯಗರ್ಭಾಚಾರ್ಯ**— ನಾಗಾಭಟ್ಟರೇ, ಇದೆಲ್ಲವೂ ಆ ಕಲಿರಾಯನ ಮಹಿಮೆ. ಏನೋ ಒಂದು ವಿನಾಶಕಾಲ ಬಂದಿದೆಯಂತೇ ಜನಗಳ ಬುದ್ಧಿಯು ಹೀಗೆ ವಿಪರೀತವಾಗಿಬಿಟ್ಟಿದೆ.

**ನಾಗಾಭಟ್ಟ**— ಸ್ವಾಮೀ, ಅಸ್ಪೃಶ್ಯತಾನಿವಾರಣೆಯಾಗುವದು ಸಾಧ್ಯವೇ ? ಹೇಳಿನೋಡುವಾ ?

**ಪದ್ಮನಾಭ**— (ಪರ್ಕಶಾಪಿನ ಸರ್ವಿಸ ಉಡುಪಿನಲ್ಲಿ) ಅದೇನಸಾಧ್ಯ ? ಮುಟ್ಟಬಾರದವರನ್ನು ಮುಟ್ಟುವರಾಯಿತು. ಅಸ್ಪೃಶ್ಯತಾನಿವಾರಣೆಯು ಆಗೇ ಹೋಗುವದು.

**ನಾಗಾಭಟ್ಟ**— ನೋಡಿಸ್ವಾಮೀ, ಹಿರಣ್ಯಗರ್ಭಾಚಾರ್ಯರೇ, ತಮ್ಮ ಚಿರಂಜೀವ ಪದ್ಮನಾಭಾಚಾರ್ಯರ ಹೇಳಿಕೆಯನ್ನು ಕೇಳಿದಿರಾ ?

**ಹಿರಣ್ಯ**— ಕೇಳಿದ, ಸ್ವಾಮೀ ಕೇಳಿದೆ. ಆಗಲೇಹೇಳಿದೆನಲ್ಲವೇ, ಇದೆಲ್ಲವೂ ಆ ಕಲಿರಾಯನ ಪ್ರಭಾವವೆಂದು ?

**ಪದ್ಮ**— ಅಪ್ಪಾ ಕಲಿರಾಯನ ಪ್ರಭಾವವಲ್ಲ. ಆ ಕಲಿಮಲಾಂತಕನಾದ ನಾರಾಯಣನ ಪ್ರಭಾವ. ಈಗ್ಗೆ ಎಷ್ಟೋ ಸಾವಿರವರ್ಷಗಳಿಂದ ಕಲಿರಾಯನ ಆಳಿಕೆಯಲ್ಲಿ ಸಿಕ್ಕು ಮತಿಗೆಟ್ಟ ಪ್ರಪಂಚವನ್ನು ಹಾದಿಗೆ ತರುವದಕ್ಕಾಗಿಯೇ ಹೀಗೆ ಜಗತ್ತಿನಲ್ಲಿ ನಾಲ್ಕೂ ದಿಕ್ಕಿನಿಂದಲೂ ಸುವಿಚಾರ ಸದಾಚಾರಗಳ ಗಾಳಿಯು ಬೀಸುತ್ತಲಿದೆ. ಮಾನವ ಬಂಧುಗಳನ್ನು ಮಚ್ಚೆಗಿಂತಲೂ ಕಡೆಯಾಗಿ ಭಾವಿಸುವ ಮಾನವರೇ ಕಲಿಪುರುಷನ ಅನುಯಾಯಿಗಳು. ಹಾಗೆ ಭಾವಿಸಲಾಗದೆಂದು ಹೇಳತಕ್ಕವರು ದೇವದೂತರಲ್ಲವೆ !

**ನಾಗಾ**— ನೋಡಿ, ಬುದ್ಧಿಭ್ರಂಶದ ಲಕ್ಷಣವು ಹೇಗಿದೇ !

**ಪದ್ಮ**— ಮಾವಂದಿರೇ, ಇದು ಬುದ್ಧಿಭ್ರಂಶದ ಲಕ್ಷಣವಲ್ಲ; ಬುದ್ಧಿವಂತಿಕೆಯ ಲಕ್ಷಣವು.

**ಹಿರಣ್ಯ**— ಅಲ್ಲವೊ ? ಕಾಣಾ ಕಾಣಾ ಹೊಲೆಯರನ್ನು ಮುಟ್ಟಿಕೊಂಡು ವ್ಯವಹಾರವನ್ನು ಮಾಡಬೇಕೆಂದು ಹೇಳುವದು ಬುದ್ಧಿವಂತಿಕೆಯ ಲಕ್ಷಣವೋ ?

**ಪದ್ಮ**— ಹಾಗಾದರೇ ಮೊದಲು ನನಗೀ ವರ್ಕಷಾಪಿನ ನೌಕರಿಯುನ್ನು ಬಿಡುವದಕ್ಕೆ ಅಪ್ಪಣೆಯಾಗಲಿ. ಯಾಕಂದರೇ ಅಲ್ಲಿ ನನ್ನೊಡನೆ ಕೆಲಸ ಮಾಡುವವರೆಲ್ಲರೂ ಅಸ್ಪೃಶ್ಯರೇ ಇದ್ದಾರೆ. ನನ್ನ ಮಿಸ್ತ್ರಿನೂ ಅಸ್ಪೃಶ್ಯನಿದ್ದಾನೆ. ಕೆಲಸಕ್ಕೆ ಹೋದ ತಕ್ಷಣವೇ ಮೊದಲವನಿಗೆ ನಮಸ್ಕಾರ ಮಾಡಲೇಬೇಕಾಗುವದು!

**ನಾಗಾ**— ಹಾಗಿದ್ದರೆ, ಹಿರಣ್ಯಗರ್ಭಾಚಾರ್ಯರೇ, ನೀವು ಪದ್ಮನಾಭನಿಗೆ ಮೊದಲು ವರ್ಕಷಾಪಿನ ನವಕರಿಯುನ್ನು ಬಿಡಿಸುವದುತ್ತಮ. ತಾವು ಅಗ್ನಿಹೋತ್ರಿ ಮನೆತನದವರು. ತಮ್ಮಮಗನು ಅಸ್ಪೃಶ್ಯರಿಗೆ ಶಿರಬಾಗುವದಂದರೆ ಎಂಥ ಅನ್ಯಾಯು ? ಶಿವಶಿವಾ !

**ಹಿರಣ್ಯ**— ಅದು ವ್ಯವಹಾರವಾಯಿತು ನಾಗಾಭಟ್ಟರೇ. ವ್ಯವಹಾರದಲ್ಲಿ ಪ್ರಸಂಗೋಪಾತ್ ಅವರು ಇವರಿಗೆ ಇವರು ಅವರಿಗೆ ನಮಸ್ಕಾರವನ್ನು ಮಾಡಿದರೇ ದೋಷವೇನು ? ಮನೆಗೆ ಬಂದು ಸ್ನಾನ ಸಂಧ್ಯಾದಿಗಳನ್ನು ತೀರಿಸಿಕೊಂಡರೆ ಆ ದೋಷಗಳು ನಿವಾರಣೆಯಾಗಿಯೇ ಹೋಗುವವು.

**ನಾಗಾ**— ಅದು ನಿಜ॥ ಆಪೋಹಿಷ್ಠಾ ಮಯೋಭುವಃ ॥ ಎಂದು ಮಾರ್ಜನೆ ಮಾಡಿಕೊಂಡಮೇಲೆ ಯಾವ ದೋಷಗಳುಳಿಯುವವು ?

**ಪದ್ಮ**— ಅಂತಹ ಅನುಕೂಲತೆಗಳು ನಮಗಿರುವಾಗ್ಗೆ ನಾವು ಅಸ್ಪೃಶ್ಯರನ್ನು ಮುಟ್ಟಲು ಭಯಪಡುವದೇಕೆ ?

**ಹಿರಣ್ಯ**— ವ್ಯವಹಾರದಲ್ಲಿ ಹೇಗಾದರೂ ಮಾಡಬಹುದು.

**ಪದ್ಮ**— ಅವರಾದರೂ ವ್ಯವಹಾರದ ಮಟ್ಟಿಗೇನೇ ಹೇಳುತ್ತಿರುವರು. ಅಸ್ಪೃಶ್ಯರೊಡನೆ ಶರೀರಸಂಬಂಧವನ್ನು ಬೆಳೆಸಿರೆಂದು ನಿಮಗಾರು ಆಗ್ರಹ ಮಾಡುವರು ?

**ಹಿರಣ್ಯ**— (ನಿರುತ್ತರಭಾವ ನಟಿಸಿ) ಅದು ಹೋಗಲಿ. ಅಸ್ಪೃಶ್ಯರನ್ನು ದೇವಾಲಯುಗಳಲ್ಲಿ ಬಿಡಿರೆಂದು ಹೇಳುವ ಮಾತು ಸರಿಯೇ ?

**ನಾಗಾ**— ಶುದ್ಧ ಭ್ರಷ್ಟಾಕಾರ !

**ಪದ್ಮ**— ಅಪ್ಪಾ ನಾವು ನಮ್ಮ ಮನಸಿನ ಸಮಾಧಾನಕ್ಕಾಗಿ ದೇವರನ್ನು ಅಭಿಷೇಕಾದಿಗಳಿಂದ ಶುದ್ಧಮಾಡಿಕೊಂಡರಾಯಿತು. ಸುಮ್ಮನೆ ಅವನ್ನು ಮುಟ್ಟ ಬೇಡಿ ಇದನ್ನು ಮುಟ್ಟಬೇಡಿ ಎಂದು ಗೊಂದಲವನ್ನೆಬ್ಬಿಸಿ ಮಾನವ ಬಂಧುಗಳ ಮನನೋಯಿಸುವದೇಕೆ ?

**ನಾಗಾ**— (ನಿರುತ್ತರಭಾವನಟನೆ) ಇದೂ ಒಂದು ವಿಹಿತಾಲೋಚನೆಯೋ ! ತಿರಲಿ. ಪದ್ಮನಾಭಾ ನಮ್ಮ ಬಾವಿಗಳಲ್ಲಿ ಅವರಿಗೆ ನೀರು ತುಂಬಲಾಸ್ಪದವನ್ನು ಕೊಡಬಹುದೇ ?

**ಪದ್ಮ**— ಏಕೆ ಕೊಡಬಾರದು ? ನಮ್ಮ ಬಾವಿಗಳಲ್ಲಿ ಆ ಮಹಮ್ಮದ ಸಾ॥ ನ ಮತ್ತೂ ಆ ಜೋಶೇಫ ಸಾ॥ ನ ಮನೆ ಜನಗಳು ನೀರು ತುಂಬಿಕೊಂಡು ಹೋಗುವದಿಲ್ಲವೇ ?

**ಹಿರಣ್ಯ**— ಎಲೋ ಧಡ್ಡಾ ಅವರು ಕಿರಸ್ತಾನ ಮತ್ತೂ ಮುಸಲ್ಮಾನರೋ !

**ಪದ್ಮ**— ಅವೆರಡೂ ಮನೆತನದವರು ಮೊದಲು ಅಸ್ಪೃಶ್ಯರೇ ಆಗಿದ್ದರು. ಧರ್ಮಾಂತರವನ್ನುಮಾಡಿ ಕ್ರಿಶ್ಚನ್ ಮತ್ತೂ ಮುಸಲ್ಮಾನರಾಗಿದ್ದಾರೆ. ಬೇಕಾದರೇ ಕೇಳಿಸಿ ಕೊಡುವೆನು ಬನ್ನಿರಿ.

**ನಾಗಾ**— ಧರ್ಮಾಂತರವನ್ನಾದರೂ ಮಾಡಿರುವರೋ ಇಲ್ಲವೋ ? ಅಸ್ಪೃಶ್ಯರು ಬೇರೇ ಅಲ್ಲವಲ್ಲಾ ?

**ಪದ್ಮ**— ಅಸ್ಪೃಶ್ಯರು ಧರ್ಮಾಂತರಮಾಡಿ ಕ್ರಿಶ್ಚನ್ ಅಥವಾ ಮುಸಲ್ಮಾನರಾದರೆ ಸ್ಪೃಶ್ಯರಾಗುವರೆಂದು ಯಾವ ಧರ್ಮಶಾಸ್ತ್ರದಲ್ಲಿ ಬರೆದಿದೆ ?

(ಇಬ್ಬರು,) ಶಾಸ್ತ್ರದಲ್ಲಿ ಬರೆಯದಿದ್ದರೂ ರೂಢಿಯೊಂದಿದೆಯಲ್ಲಾ ರೂಢಿ ! " ಶಾಸ್ತ್ರಾದ್ರೂಢಿರ್ಬಲೀಯಸೀ "

**ಪದ್ಮ**— ಅಂತೇ, ತಿಳಿದವರು ಈ ಅಸ್ಪೃಶ್ಯತಾನಿವಾರಣೆಯ ರೂಢಿಯನ್ನು ಬಲಪಡಿಸುತ್ತಲಿದ್ದಾರೆ.

**ಹಿರಣ್ಯ**— ಏನೋ ಎಂತೋ ಈ ಕಾಲಮಹಿಮೆಯೇ ಗೊತ್ತಾಗದು. ಮಹಾರಾಯಾ ಏನು ಹುಟ್ಟಿ ಬಂದನಪ್ಪಾ ಗಾಂಧೀಯೆಂದೂ ?

**ನಾಗಾ**— ಶುದ್ಧ ಕಲಿಯುವತಾರ. ವರ್ಣಾಶ್ರಮಧರ್ಮಗಳನ್ನು ಮುಳು ಗಿಸಲಿಕ್ಕೆ ಹುಟ್ಟಿಬಂದ ಶುದ್ಧ ಕಲಿಯುವತಾರ.

**ಪದ್ಮ**— ಹಾಗೆ ಹೇಳಬೇಡಿ. ಧರ್ಮವೆಂದು ಹೇಳಿ ನಿರಾತಂಕವಾಗಿ ಅನ್ಯಾಯವನ್ನು ಮಾಡುವ ಜಗಕ್ಕೆ ನಿಜವಾದ ಧರ್ಮವನ್ನು ಕಲಿಸುವ ಶುದ್ಧಾವತಾರ.

**ಹಿರಣ್ಯ**— ಹೋಗು ಹೋಗು ಬಹುಪಂಡಿತನಾಗಿರುವಿ. (ಪದ್ಮನಾಭ ಹೋಗುವನು.) ನಾಗಾಭಟ್ಟರೇ ಈ ಕಾಲ ಚಕ್ರದಗೂಡ ನಾವು ತಿರಗುವದೇಕೆ? ಉಳಿದ ಸ್ವಲ್ಪ ದಿನಗಳನ್ನು ನಮ್ಮ ಶ್ರೇಷ್ಟತ್ವಕ್ಕೆ ನಾವು ಶುದ್ಧಾಚರಣೆಯಿಂದ ಕಳೆದು ಹೋದರಾಯಿತು.

**ನಾಗಾ**— (ಏಳುತ್ತ) ಅದೂ ನಿಜ. ಆಗಲಿ ಬರುವೆನು.

**ಹಿರಣ್ಯ**— ಬಂದಕಾರಣವು ಗೊತ್ತಾಗಲಿಲ್ಲ ಭಟ್ಟರೇ ?

**ನಾಗಾ**— (ಹೋಗಿ ಬಂದು) ಓಹೋ ಮರತೇ ಬಿಟ್ಟಿದ್ದೆನು. (ಮೆಲ್ಲಗೆ) ಇದೋ ನಿಮ್ಮ ಮಗಳಾದ ಶಾರದೆಯನ್ನು ಇನ್ನು ಹಾಗೇ ಬಿಡುವದೊಳಿತಲ್ಲ. ಅವಳು ಪು...ನ...ರ್ವಿ...ವಾಹ.

**ಹಿರಣ್ಯ**— (ಗಾಬರಿ) ಹೀಗೋ ಹಾಗಿದ್ದರೆ ನಾಳಿನ ದಿನವೇ ಅವಳನ್ನು ಶುದ್ಧಮಾಡಿಸುವೆನು. ಆ ಮೇಲೇನು ?

**ನಾಗಾ**— ಅದಾಗಲೇಬೇಕು. ಇಲ್ಲವಾದರೇ ತಮ್ಮ ಮನೆತನಕ್ಕೆ ಕಲಂಕವು ತಟ್ಟಿತೆಂದೇ ತಿಳಿಯಿರಿ! ತಾವು ನಮ್ಮ ಬೀಗರು ತಮ್ಮ ಮರ್ಯಾದೆಯೇನು ನಮ್ಮ ಮರ್ಯಾದೆಯೇನು ? ಎರಡೂ ಒಂದೇ! ಅದನ್ನು ಕಳಕೊಂಡರೆ ಹೇಗೆ ?

**ಹಿರಣ್ಯ**— ಅದು ಸಾಧ್ಯವಿಲ್ಲ. ಬೆಳಗೊಂದಾಗಲಿ ಆಮೇಲೆ ನೋಡಿರಿ. (ನಾಗಾಭಟ್ಟ ಹೋಗುವನು.) ಏನು! ಶಾರದೆ...ನಮ್ಮ ಶಾರದೆ...ಅಂತಹ ಪಾಪ ವಿಚಾರಗಳನ್ನು ಮಾಡತಕ್ಕವಳೇ ? ಪುನರ್ವಿವಾಹ. ಅಯ್ಯೋ ಮೈಕೂದಲುಗಳು ನೆಟ್ಟಗಾಗುವವು! ಅಥವಾ ಯಾರುಬಲ್ಲರು! ಅವಳಂತಹ ವಿಚಾರಗಳನ್ನೇ ಮಾಡಿದ್ದರೇ! ಛೀ ಇನ್ನು ಸುಮ್ಮನಿದ್ದು ಪ್ರಯೋಜನವಿಲ್ಲ. ಬೇಗ ಅವಳನ್ನು



ಹಿರಣ್ಯಗರ್ಭಾಚಾರ್ಯ. ನಾಗಾಭಟ್ಟ.

ನಾಗಾಭಟ್ಟ:—ಅವಳು ಪು···ನ···ರ್ವಿ···ವಾಹ—

ಹಿರಣ್ಯ:—ಆಂ? ಹೀಗೋ?

[ಪುಟ ೮.

ಶುದ್ಧಮಾಡಿಸುವಾ. (ತಿರೆ ನೋಡಿ) ಏ. ಯೇನೇ ? ಸ್ವಲ್ಪ ಹೀಗೆ ಬಾ (ರಮಾ ಬಾಯಿ ಬರುವಳು.) ಶಾರದೆಯಲ್ಲೀ ?

ರಮಾ— ಅವಳು ಹಿತ್ತಲ ಪಡಸಾಲೆಯಲ್ಲಿ ಏನೋ ಓದುತ್ತ ಕುಳಿತಿದ್ದಾಳೆ. ಏಕೇ ಅವಳೇತಕ್ಕೆಬೇಕು ?

ಹಿರಣ್ಯ— ಒಂದಾಲೋಚನೆ ಅದಕ್ಕೆ ನಿನ್ನಭಿಪ್ರಾಯವೇನಾಗುವದೋ ನೋಡುವ.

ರಮಾ— ಅದೇನು ?

ಹಿರಣ್ಯ— ನಮ್ಮ ಶಾರದೆಯನ್ನು ಇನ್ನು ಹಾಗೇ ಬಿಡುವದೊಳಿತಲ್ಲ. ನೋಡು ತೀವ್ರ ಶುದ್ಧಮಾಡಿಸಬೇಕು. (ಸ್ವಲ್ಪ ಹೀಗೆ ಬಾ. ಕಿವಿಯಲ್ಲಿ ಹೇಳುವನು.)

ರಮಾ— ಅದೆಲ್ಲ ಸರಿ ! ಆದರೇ ಮೊನ್ನೆ ಮೊನ್ನೆ ಮನೆಯಲ್ಲಿ ಪದ್ಮನಾಭನ ಮುಂಪುವೆಯಾಗಿದೆ. ಇಷ್ಟರಲ್ಲಿಯೇ ಈ ಅಶುಭಕಾರ್ಯವನ್ನು ಹೇಗೆ ನಡಿಸ ಬೇಕು ?

ಹಿರಣ್ಯ— ಅದು ನಿಜ. ಈ ವರ್ಷ ಮುಗಿಯುವತನಕ ಹಾಗೆ ಮಾಡಲಿಕ್ಕೆ ಬರುವದಿಲ್ಲ. ಅದಕ್ಕೇನಾಲೋಚನೆ ?

ರಮಾ— ಹೇಗಾದರೂ ಮಾಡಿ ಅವಳನ್ನು ಕಾಯುತ್ತಿರಬೇಕು. ಹೆಚ್ಚಾಗಿ ಮನೆ ಹೊರಗೆ ಹೋಗಗೊಡಬಾರದು.

ಹಿರಣ್ಯ— ಅಷ್ಟುಮಾಡು. ನೋಡೂ! ಏನಾದರೂ ಹೆಚ್ಚುಕಡಿಮೆಯಾದರೇ ನಾನಂತೂ ದೇಶಾಂತರ ಪಾಲಾಗುವದೇ ನಿಶ್ಚಯ. ಜೋಕೆ, ಅದೋ ಪದ್ಮ ನಾಭನು ಕರೆಯುತ್ತಲಿದ್ದಾನೆ ಅವನಿಗೆ ಊಟಬಡಿಸು. ಹೋಗು. (ನಿಷ್ಕ್ರಾಂತ)

---

# ೩ನೆಯ ಪ್ರವೇಶ

(ಮಾಧವರಾಯರ ಮನೆ ದಿವಾಣಖಾನೆ.)

**ಮಾಧವರಾಯ**— (ಪುಸ್ತಕವನ್ನು ಟೇಬಲಮೇಲೆ ಒಗೆದು) ಇನ್ನೇಕೆಬೇಕು. ಈ ಸಂಸ್ಕೃತಾಭ್ಯಾಸದ ಹವ್ಯಾಸವು. ನಾನು ನಿಜವಾಗಿಯೂ ಸಂಸ್ಕೃತವನ್ನು ಕಲಿಯಲಪೇಕ್ಷೆಯುಳ್ಳವನೆಂದು ಬಗೆದು ಆ ಲೋಭಿಯಾದ ಹಿರಣ್ಯಗರ್ಭಾಚಾರ್ಯನು ನನಗೆ ನಿರಾತಂಕವಾಗಿ ಮನೆಗೆ ಬರಹೋಗಲವಕಾಶಕೊಟ್ಟನು. ಶಾರದೆಯೇ ವಶಳಾದಬಳಿಕ ಮತ್ತಾವ ವಿದ್ಯೆಯು ಅಗತ್ಯವಿದೆ? ಇದೆಲ್ಲ ಸರಿಯಾದರೂ ಅವಳು ಪುನರ್ವಿವಾಹದ ತಗಾದೆಯನಿಟ್ಟಿದ್ದಾಳೆ. ಅದಕ್ಕೇನು ಮಾಡಲೀ? ನನಗಂತೂ ಪುನರ್ವಿವಾಹವನ್ನು ಮಾಡಿಕೊಳ್ಳುವದು ಇಷ್ಟವಿಲ್ಲ. ಮತ್ತೂ ಅದು ನನ್ನ ಲೌಕಿಕಕ್ಕೆ ಭೂಷಣವೂ ಅಲ್ಲ. ಹೇಗೆಮಾಡಲೀ? ಯಾವ ಹಂಚಿಕೆಯಿಂದ ತಪ್ಪಿಸಿಕೊಳ್ಳಲೀ? ಅವಳಮೇಲೆ ಏನಾದರೊಂದಪವಾದವನ್ನು ಹೊರಿಸಿ ಈ ಪುನರ್ವಿವಾಹದ ಪೀಕಲಾಟ ತಪ್ಪಿಸಬೇಕೆಂದರೆ ಅದೂ ಸಾಧ್ಯವಿಲ್ಲ. ಯಾಕಂದರೇ ಅವಳು ಬಹು ಮರ್ಯಾದೆಶೀಲೆ.

**ಶಾರದಾ**— (ಆತುರದಿಂದ ಬಂದು) ಪ್ರಿಯಾ ಇದೋ ತೀವ್ರ ವಿವಾಹದ ಶಿಷ್ಟಾಚಾರವನ್ನಷ್ಟು ನೆರವೇರಿಸಿ ಬಿಡಿರಿ. ಇನ್ನು ತಡೆಯುವಂತಿಲ್ಲ!

**ಮಾಧವ**— ಗಾಂಧರ್ವ ಪದ್ಧತಿಯಂತೆ ಅದಂತೂ ಆಗಿಯೇ ಹೋಗಿದೆ. ಇನ್ನು ಲೌಕಿಕರ ಸಲುವಾಗಿ ಶಿಷ್ಟಾಚಾರವಷ್ಟೆ ಉಳಿದಿದೆ.

**ಶಾರದಾ**— ಅದಾದರೂ ತೀವ್ರವಾಗಲೇಬೇಕು.

**ಮಾಧವ**— ಆತುರವೇಕೇ? ಈ ಚಾತುರ್ಮಾಸವಾದರೂ ಮುಗಿಯಲಿ.

**ಶಾರದಾ**— ಚಾತುರ್ಮಾಸವು ಮುಗಿಯುವಷ್ಟರಲ್ಲಿ ಷಣ್ಮಾಸವಾಗುವದು.

**ಮಾಧವ**— ಅಂದರೇ?

**ಶಾರದಾ**— (ನಾಚಿಕೆಯಿಂದ) ನನ್ನ ಸ್ಥಿತಿಯಲ್ಲೇನೋ ಅಭ್ಯಂತರವಾಗಿದ್ದಂತೆ ತೋರುತ್ತದೆ. ಇದೆಂತಹ ತೊಂದರೆ ನೋಡೀ? ಅದಕ್ಕೆ ತೀವ್ರ ಯಾವ

ದಾದರೊಂದು ದೇವಸ್ಥಾನದಲ್ಲಿ ಒಂದೇ ದಿನದಲ್ಲಿ ವಿವಾಹವಿಧಿಯನ್ನು ನೆರವೇರಿಸಿಕೊಂಡು ಬಿಡಿ. ಅಲ್ಲದೇ ಇನ್ನುಮೇಲೆ ಆಗಾಗ್ಗೆ ತಮ್ಮನ್ನು ಕಾಣುವದಕ್ಕೂ ನನಗವಕಾಶವಾಗದು. ಏಕೆಂಪೆರೇ ಕೆಲಮುಟ್ಟಿಗೆ ನಾನು ಪುನರ್ವಿವಾಹಿತಳಾಗುವೆನೆನ್ನುವ ಸಂಶಯವು ಬಂದದ್ದಕ್ಕಾಗಿಯೋ ಏನೋ ಮನೆಯ ಜನಗಳು ವಿಶೇಷವಾಗಿ ನನ್ನನ್ನು ಹೊರಗೆ ಹೋಗಗೊಡದಂತಾಗಿದ್ದಾರೆ, ಅಲ್ಲದೇ ಆದಷ್ಟು ಬೇಗ ನನ್ನನ್ನು ಶುದ್ಧಮಾಡುವಾಲೋಚನೆಯನ್ನು ನಡಿಸಿದ್ದಾರೆ.

**ಮಾಧವ**— (ಸ್ವಗತ) ಹಾಗಾದರಂತೂ ಅನುಕೂಲವೇ !

**ಶಾರದಾ**— ಏಕೇ ಏನನ್ನುವಿರಿ ? ನಾಲ್ಕಾರು ದಿನಗಳಲ್ಲಿಯೇ ಅದರಾಲೋಚನೆಯಾಗಲಿಕ್ಕೇ ಬೇಕು.

**ಮಾಧವ**— ಆಗಲಿ ಏನಾದರೂ ವಿಚಾರಮಾಡುವೆನು. ಚಿಂತಿಸಬೇಡ.

**ಶಾರದಾ**— ಹಾಗೆ ಮಾಡದಿದ್ದರೆ ನನ್ನ ಕೊಂಳಹಣೆಯಾಗಿದೆ. (ನಿಷ್ಕ್ರಾಂತ)

**ಮಾಧವ**— (ಅವಳನ್ನು ತಡೆದು) ಆತುರವೇಕೆ ಹೋಗುವಿಯಂತೆ ನಿಲ್ಲು.

**ಶಾರದಾ**— ನಿಲ್ಲುವ ಹಾಗಿಲ್ಲ ನಾನು ಸ್ವಲ್ಪು ಕಣ್ಣುಮರೆಯಾದ ತಕ್ಷಣವೇ ಮನೆ ಜನಗಳೆಲ್ಲರೂ ಒಂದೇಸವನೇ ಹುಡುಕಲಾರಂಭಿಸುವರು. (ಆತುರದಿಂದ ಹೋಗುವಳು.)

**ಮಾಧವ**— ಅಹಹಾ ಇವಳು ಗರ್ಭಿಣಿಯಾದದ್ದೊಂದನುಕೂಲವೆ ! ನಾಲ್ಕಾರು ತಿಂಗಳ ನಾವೆತ್ತಾದರೂ ತಲೆತಪ್ಪಿಸಿಕೊಂಡು ಹೋಗಿಬಿಟ್ಟರೇ ತೀರಿತು. ಅವಳು ತನ್ನ ಮರ್ಯಾದೆಯನ್ನುಳಿಸಿಕೊಳ್ಳುವದಕ್ಕಾಗಿ ಗರ್ಭಪಾತವನ್ನಾದರೂ ಮಾಡಿಕೊಳ್ಳಬೇಕು ಇಲ್ಲವೇ ಆತ್ಮಹತ್ಯವನ್ನಾದರೂ ಮಾಡಿಕೊಳ್ಳಲಿಕ್ಕೇಬೇಕು. ಆ ಎರಡರಲ್ಲಿ ಯಾವದಾದರೂ ನಮಗೆ ಸಂತೋಷವೆ. ಅಂತೂ ನಮ್ಮನ್ನು ಹಿಂಬಾಲಿಸಿದ ಪುನರ್ವಿವಾಹದ ಉಪಾಧಿಯು ತಪ್ಪುವದು. (ಹೋಗುವ)

---

# ೪ನೆಯ ಪ್ರವೇಶ

(ಹಿರಣ್ಯಗರ್ಭಾಚಾರ್ಯರ ಮನೆಯ ಹಿತ್ತಲಪಡಸಾಲೆ.)

**ರಮಾಬಾಯಿ—** ಹೂಂ ತೆಗಿದುಕೋ ಈ ಔಷಧವನ್ನು. ನಿರ್ಲಜ್ಜೇ ? ನಮ್ಮ ಮನೆತನದ ಮರ್ಯಾದೆಯನ್ನು ಮಾರಿಬಿಟ್ಟೆ.

**ಶಾರದಾ—** ನಾನೇನು ತೆಗಿದುಕೊಳ್ಳುವದಿಲ್ಲ. ನೀನು ಬೇಕಾದದ್ದು ಮಾಡು ಹೊಟ್ಟೆಯದನ್ನು ಕೆಡಹಿಕೊಂಡು ಪಾಪವನ್ನು ಕಟ್ಟಿಕೊಳ್ಳಲೋ ?

**ರಮಾ—** ನೀನಿದನ್ನು ತೆಗಿದುಕೊಳ್ಳದಿದ್ದರೇ ನಾನು ಬಾವಿಯಲ್ಲಿ ದುಮುಕಿ ಪ್ರಾಣಕೊಡುವೆನು ನೋಡು !

**ಶಾರದಾ—** (ಅಳುತ್ತ) ಏತಕ್ಕೆ ಇಂತಹ ಅಕ್ಕಸತನವಮ್ಮಾ ? ನಾನೇನು ತಪ್ಪುಮಾಡಿರುವೆನು ? ಪುನರ್ವಿವಾಹಿತಳಾಗಿದ್ದೇನ.

**ರಮಾ—** (ಅಣಕಿಸಿ) "ಪುನರ್ವಿವಾಹಿತಳಾಗಿದ್ದೇನೆ" ಪುನರ್ವಿವಾಹಿತಳಾಗಿ ಕುಲಗೆಟ್ಟ ನೀನು ನಮ್ಮ ಮನೆಯಲ್ಲಿ ನಿಂತು ಏತಕ್ಕೆ ಭ್ರಷ್ಟಾಕಾರವನ್ನು ಮಾಡುವಿ ? ಹೋಗಬೇಕಾಗಿತ್ತು ಮಾಡಿಕೊಂಡವನ ಬೆನ್ನುಹತ್ತಿ.

**ಶಾರದಾ—** ಹೋಗುವೆನು ! ಆದರೇ ಅದಕ್ಕಿನ್ನೂ ತುಸು ಅವಕಾಶವಿದೆ.

**ರಮಾ—** ಅದೆಲ್ಲವನ್ನು ನಾನು ಕೇಳುವದಿಲ್ಲ. ನೀ ನೀ ಔಷಧವನ್ನಾದರೂ ತಕೊಳ್ಳಬೇಕೂ ಇಲ್ಲವೇ ಇಂದೇ ನಮ್ಮ ಮನೆಯನ್ನು ಬಿಟ್ಟುಹೋಗಬೇಕು. ಈ ಎರಡರಲ್ಲೊಂದಾದರೊಂದಾಗಲಿಕ್ಕೇಬೇಕು.

**ಶಾರದಾ—** (ಬಿಕ್ಕಿ ಬಿಕ್ಕಿ ಅಳುವಳು)

**ಪದ್ಮನಾಭ—** (ಬಂದು ನೋಡಿ ಗಾಬರಿಯಾಗಿ) ಅಮ್ಮಾ ! ಏನಿದು ಗಲಾಟೆ ? ಶಾರದೇ ಅಳುವಿಯೇಕೆ ?

**ರಮಾ—** ಪದ್ಮನಾಭಾ, ಏನು ಹೇಳಲಿ, ನಿನ್ನ ತಂಗಿಯು ನಮ್ಮ ಮುಖಗಳಿಗೆಲ್ಲಾ ಕಪ್ಪುಬಳೆದಳೋ ಅಪ್ಪಾ—

**ಪದ್ಮ—** ಅಂತಹದೇನು ತಪ್ಪು ಮಾಡಿದಳಮ್ಮಾ ?

**ರಮಾ**— ಮಾಡಿಬಿಟ್ಟಿದ್ದಾಳೆ ನೋಡು. ಚಾಂಡಾಲಮುಂಡೆ! ಯಾವನಿಂದಲೋ ಗರ್ಭವನ್ನು ಹೊತ್ತು......

**ಪದ್ಮ**— (ಉದ್ವಿಗ್ನ) ಸರಿ! ಯಾವ ಸಮಯಕ್ಕಾಗಿ ಹೆದರುತ್ತಿದ್ದೆನೋ ಅದೇ ಎದುರಾಯಿತು! ಶಾರದೇ ವಿಚಾರವತಿಯಾದ ನೀನು ಹೀಗೆ ಮಾಡಿದ್ದು ಸರಿಯಾಗಲಿಲ್ಲಮ್ಮಾ!

**ಶಾರದಾ**— ಅಣ್ಣಾ, ನನ್ನ ಪ್ರೀತಿಯ ಅಣ್ಣಾ. ನಾನು ಸರ್ವಥಾ ಪಾಪಿಣಿಯಲ್ಲವೋ! ಓರ್ವ ಕುಲೀನ ಪುರುಷನನ್ನು ಪುನರ್ವಿವಾಹಮಾಡಿಕೊಂಡಿದ್ದೇನೆ.

**ರಮಾ**— ನೋಡೋ ಹೇಗೆ ಹೇಳುವಳು! ಪುನರ್ವಿವಾಹಮಾಡಿಕೊಂಡಿರುವಳಂತೆ ಪುನರ್ವಿವಾಹ.

**ಪದ್ಮ**— ಆದರೇನು ತಪ್ಪಾಯಿತು?

**ರಮಾ**— ಥೂ ಭ್ರಷ್ಟಾ ನೀನು ಸಹ ಅವಳ ಪಾಪಕರ್ಮವನ್ನನುಮೋದಿಸುವಿಯಾ?

**ಪದ್ಮ**— ಅಮ್ಮಾ ಚಿತೆಯನ್ನೇರಿದ ಮುತ್ತಾತನ ಕೊರಳಲ್ಲಿ ಹೊಟ್ಟೆಯ ಕರುಳನ್ನು ಕಟ್ಟುವಂಥ ಪಾಪವನ್ನೇನವಳು ಮಾಡಿದವಳಲ್ಲವಲ್ಲ! ಇವಳನ್ನು ಆ ಭುಜಂಗ ಸರಾಫನೆನ್ನುವ ಹೆಣಕ್ಕೆ ಕೊಟ್ಟು ಲಗ್ನಮಾಡುವಾಗ್ಗೆ ನಿಮಗೆ ನಾನೆಷ್ಟು ಬಗೆಯಾಗಿ ಹೇಳಿಕೊಂಡೆನು! ನಾಲ್ಕುಸಾವಿರ ರೂಪಾಯಿಗಳ ಗಂಟು ಮನೆಯಲ್ಲಿ ಬಂದು ಬಿದ್ದಕೂಡಲೇ ನಿಮ್ಮ ಬುದ್ಧಿಯು ಭ್ರಂಶವಾಗಿಬಿಟ್ಟಿತು. ತಾವರೆಯನ್ನು ಉರಿಯಲ್ಲೊಗೆಯುವಂತೆ ನನ್ನ ತಂಗಿಯನ್ನು ಆ ಮುದುಕನಿಗೆ ಕೊಟ್ಟು ಮದುವೆಮಾಡಿ ಹದಿನಾರು ದಿನಗಳೊಳಗಾಗಿಯೇ ಇವಳಿಗೆ ವೈಧವ್ಯವನ್ನು ತಂದಿರಿ. ಅಮ್ಮಾ ನಿಮ್ಮಂಥ ಲೋಭಿಗಳಾದ ತಾಯಿತಂದೆಗಳಾಡುವ ಭೂತಾಟಿಕೆಗೆ ಪುನರ್ವಿವಾಹವೇ ತರುಣಿಯರಿಗೆ ಲೌಕಿಕವಾದ ಮಾರ್ಗವಲ್ಲವೇ? ಇಷ್ಟೆಲ್ಲ ಮಾಡಿ ಸಂಪಾದಿಸಿದ ಹಣವಾದರೂ ನಿಮ್ಮಲ್ಲುಳಿಯಿತೇ? ಅದು ಹೇಗೆ ಉಳಿದೀತು? ಪಾಪಿಯವಿತ್ತು ಚಾಂಡಾಲನ ಪಾಲೆನ್ನುವಂತೆ ಇಟ್ಟ ಬ್ಯಾಂಕೇ ಮುಳುಗಿಹೋಯಿತು.

**ರಮಾ**— ಪದ್ಮನಾಭಾ ಇವಳು ಪುನರ್ವಿವಾಹವನ್ನು ಮಾಡಿಕೊಂಡರೇ ನಮ್ಮ ಮನೆತನದ ಗತಿಯೇನು ?

**ಪದ್ಮ**— ಅದಕ್ಕೇನಾಗುವದು ?

**ರಮಾ**— ಸ್ವಾಮಿಗಳು ನಮಗೆ ಬಹಿಷ್ಕಾರವನ್ನು ಹಾಕಲಿಕ್ಕಿಲ್ಲವೇ ?

**ಪದ್ಮ**— ಅದೇಕೇ ? ಶಾರದೆಯು ಪುನರ್ವಿವಾಹವನ್ನು ಮಾಡಿಕೊಂಡರೇ ನಮಗೇಕೆ ಬಹಿಷ್ಕಾರ ? ಬೇಕಾದರೇ ಶಾರದೆಗೆ ಬಹಿಷ್ಕಾರವನ್ನು ಹಾಕಿಕೊಳ್ಳಲಿ ನೂರುಸಾರೆ.

**ರಮಾ**— ಈ ವಿಚಾರಗಳೆಲ್ಲಾ ನಿನ್ನ ಹಡೆದವರಿಗೆ ತಿಳಿದರೇನಾದೀತು ?

**ಪದ್ಮ**— ಅದನ್ನೀಗಲೇ ಹೇಗೆ ಹೇಳುವದು ? ಆಮೇಲೇನಾಗುವದೋ ನೋಡಿ ಹೇಳುವೆನು. ಅಮ್ಮಾ ಸ್ವಲ್ಪ ನೀನು ಒಳಗೆ ನಡೆ ಶಾರದೆಯೊಡನೆ ಕೆಲ ಮಾತುಗಳನ್ನಾಡತಕ್ಕದ್ದಿದೆ.

**ರಮಾ**— (ಹೋಗಿಬಂದು) ಅಮ್ಮಾ ಮಹಾಮಾಯಿ ಶಾರದೇ ಪುನರ್ವಿವಾಹವನ್ನು ಬ್ರಾಹ್ಮಣರ ಗೂಡಾದರೂ ಮಾಡಿಕೊಂಡಿರುವಿಯೋ ಇಲ್ಲವೋ, ಹೇಳಮ್ಮಾ

**ಪದ್ಮ**— ಅವಳು ಯಾರಗೂಡಾದರೂ ಮಾಡಿಕೊಳ್ಳಲಿ. ನಿಮಗೇನು ? ತಿರುಗಿ ನಿಮ್ಮ ಮನೆಯುಲ್ಲವಳು ಕಾಲಿಡುವದಿಲ್ಲ ಅಷ್ಟೇ ಸಾಕು. ಹೂಂ. ಅಮ್ಮಾ ಸ್ವಲ್ಪ ತೆರೆಯಾಗು ! (ರಮಾಬಾಯಿ ಹೋಗುವಳು.) ಶಾರದೇ ನಿರ್ವಂಚನೆಯಾಗಿ ನನಗೆಲ್ಲ ಸಂಗತಿಗಳನ್ನು ಹೇಳುವಿಯಾ ?

**ಶಾರದಾ**— ಅಣ್ಣಾ ನಿನ್ನಂಥ ಅಣ್ಣನನ್ನು ವಂಚಿಸಿದರೇ ದೇವರು ಮೆಚ್ಚುವನೇ ?

**ಪದ್ಮ**— ನಿಜವಾಗಿಯೂ ನೀನು ಪುನರ್ವಿವಾಹವನ್ನು ಮಾಡಿಕೊಂಡಿರುವಿಯಾ ?

**ಶಾರದಾ**— ಅಹುದು.

**ಪದ್ಮ**— ನಿನ್ನ ಪುನರ್ವಿವಾಹಿತ ಪತಿಯಾರು ? (ನಾಚುವಳು) ನಾಚಬೇಡಾ ಇದು ನಾಚುವ ಸಮಯವಲ್ಲಾ ! ?

**ಶಾರದಾ**— ಕೈತಾ ಹೇಳುವೆನು (ಪದ್ಮನ ಕೈಮೇಲೆ ಬರೆಯುವಳು.)

**ಪದ್ಮ**— ಮಾಧವರಾಯಾ ? ಯಾವ ಮಾಧವರಾಯಾ ?

**ಶಾರದಾ**— ಜಹಗೀರದಾರರು

**ಪದ್ಮ**— ಏನು ? ಜಹಗೀರದಾರ ಮಾಧವರಾಯರು ನಿನ್ನ ಪತಿಯಾದರೇ ! ಅಹಹಾ ಶಾರದೇ ನೀನು ಧನ್ಯಳು. ಆಗಲಿ ಇನ್ನು ನೀನು ಸ್ವಸ್ಥ ಚಿತ್ತಳಾಗಿರು. ನಾನು ಮಾಧವರಾಯರನ್ನು ಕಂಡು ಅವರ ಆಭಾರವನ್ನು ಮನ್ನಿಸಿ ಬೇಗ ನಿನ್ನನ್ನು ಕರೆಹಿಸಿಕೊಳ್ಳುವದಕ್ಕಾಗಿ ಹೇಳುವೆನು.

**ಶಾರದಾ**— ಏನಾದರೂ ಮಾಡಿಕೋ ನಾನಂತೂ ಇದ್ದ ಸುದ್ದಿಯನ್ನು ಹೇಳಿದೆನು. ಅಣ್ಣಾ ನಾನೂ ನಿನ್ನಗೂಡ ಬರಲೋ ?

**ಪದ್ಮ**— ಬಾ...ಬೇಕಾದರೇ ಸ್ವಲ್ಪ ತಡೆದು ಬಾ. (ಹೋಗುವರು.)

---

## ೫ನೆಯ ಪ್ರವೇಶ

**(ದಿವಾಣಖಾನೆಯಲ್ಲಿ ಮಾಧವರಾಯರು ವೃತ್ತಪತ್ರಿಕೆ ಓದುತ್ತ ಆರಾಮ ಖುರ್ಚಿಯಲ್ಲಿ)**

**ಮಾಧವ**— ಮೂರ್ಖ ಹೆಂಗಸು. ಪುನರ್ವಿವಾಹದ ಸಂಗಾದಿಯನ್ನಿಟ್ಟ ದ್ದಾಳೆ. ತಣ್ಣಗೆ ಲೋಕಾಚಾರದಂತೆ ಗರ್ಭಪಾತವನ್ನು ಮಾಡಿಕೊಂಡು ಸುಖ ವಾಗಿದ್ದರಲ್ಲವೇ ! ಅದಾಗದಂತೆ ! ಆಗಲಿ ! ನನ್ನದೇನು ನಷ್ಟವಾಗಬೇಕಾಗಿದೆ ? ಹೀಗೆ ವೈಧವ್ಯದೆಶೆಯಲ್ಲಿ ಮಕ್ಕಳನ್ನು ಪೆತ್ತುದಾದರೇ ಸಮಾಜವು ತಾನಾಗಿಯೇ ಬಹಿಷ್ಕರಿಸುವದು. ಅಷ್ಟಾಗಿ ಹೋಗುವತನಕ ನಾವೀ ಗ್ರಾಮದಲ್ಲಿ ನಿಲ್ಲಬಾರದು. ತೀವ್ರ ಎತ್ತಾದರೂ ಪೋಗಿಬಿಡಬೇಕು. ಪುನರ್ವಿವಾಹವನ್ನಾರು ಮಾಡಿಕೊಂಡಾ ರಯ್ಯಾ ಜನವಲ್ಲಿ ಆಲೋಕಿಕಾ ! (ಪದ್ಮನಾಭಾಚಾರ್ಯ ಬರುವನು) ಏನು ಪದ್ಮನಾ ಭಾಚಾರ್ಯರೇ ಅಕಸ್ಮಾತ್ ಬರೋಣಾ ?

**ಪದ್ಮ**— ಹೀಗೆಯೇ ಒಂದು ಸೂಕ್ಷ್ಮಸಮಾಚಾರ ವಿಚಾರಕ್ಕಾಗಿ ಬಂದಿದ್ದೆನು.

**ಮಾಧವ**— (ಸ್ವ) ಶಾರದೆಯು ರಹಸ್ಯವನ್ನೆಲ್ಲ ಹೊರಗೆಡವಿದಳೋ ಏನೊ! (ಪ್ರಕಾಶ) ಅದಾವ ಸೂಕ್ಷ್ಮ ವಿಚಾರಾ?

**ಪದ್ಮ**— ಶಾರದೆಯ ಸಲುವಾಗಿ ಕೆಲಮಾತುಗಳನ್ನು ಹೇಳಬೇಕೆಂದಿದ್ದೆನು.

**ಮಾಧವ**— (ಅರಿಯದವನಂತೆ) ಶಾರದೆ! ಅದಾವ ಶಾರದೆ!

**ಪದ್ಮ**— (ಸ್ವಗತ) ಅಂ ಇವನು ಹೀಗೇಕೆ ಅರಿಯದವನಂತೆ ನಟಿಸುವನು! (ಪ್ರಕಾಶ) ರಾಯರೇ ನನ್ನ ಒಡಹುಟ್ಟಿದವಳು, ಶಾರದೇ

**ಮಾಧವ**— ಅಂ— ಹಂ— ನಿಮ್ಮ ಮನೆಯಲ್ಲಿರುವ ಆ ತರುಣ ಸಕೇಶಿಯೇನು. ಅವಳು ನಿಮ್ಮ ತಂಗಿಯೋ? ಭುಜಂಗ ಸರಾಫನಿಗೆ ಅವಳನ್ನೇ ಕೊಟ್ಟಿದ್ದಿರಲ್ಲವೇ? ಅವಳದೇನು ಸಮಾಚಾರಾ?

**ಪದ್ಮ**— ರಾಯರೇ ಈಗಿನ ತಮ್ಮ ಭಾವವನ್ನು ನೋಡಿ ಮಿಕ್ಕ ಸಂಗತಿಗಳನ್ನು ಹೇಳಲು ಮನವು ಹಿಂಜರಿಯುವದು.

**ಮಾಧವ**— ಅದೇಕೇ? ಏನಿದ್ದ ಸಂಗತಿಗಳನ್ನು ಹೇಳಿರಿ. ಕೇಳುವದಕ್ಕೇನು ಅಭ್ಯಂತರ.

**ಪದ್ಮ**— ಅವಳನ್ನು ತಾವು ಪುನರ್ವಿವಾಹಮಾಡಿಕೊಂಡಿರೆಂದು ಕೇಳಿ ಸಂತೋಷದಿಂದ ನಿಮ್ಮನ್ನು ಅಭಿನಂದಿಸಲು ಬಂದಿದ್ದೇನೆ. ಅವಳು ತಮ್ಮ ಪುನರ್ವಿವಾಹಿತ ಸ್ತ್ರೀಯಲ್ಲವೇ?

**ಮಾಧವ**— ಏ ಏ ಹುಚ್ಚಬ್ರಾಹ್ಮಣಾ ನಿನಗೇನಾಗಿದೇ? ಹೀಗೇಕೆ ಬಡಬಡಿಸುವೀ? ನಿನ್ನ ಮಾತುಗಳ ಅರ್ಥವೇ ನನಗಾಗದಂತಾಗಿದೆ. ಹೋಗು ಹೋಗು, ವರ್ಕಷಾಪಿನ ಯಾವದಾದರೊಂದು ರಸಾಯನದ ಹೊಗೆಯು ನಿನ್ನ ಬುದ್ಧಿ ಭ್ರಂಶ ಮಾಡಿ ಬಿಟ್ಟಿದೆಯಂದು ಕಾಣುತ್ತೆ.

**ಪದ್ಮ**— ರಾಯರೇ ಹಾಗೇನು ಆಗಿಲ್ಲ. ಇದೋ ಅವಳೀ ಸಂಗತಿಯನ್ನು ಮತ್ತಾರಿಗೂ ಹೇಳಿಲ್ಲ. ನನಗೊಬ್ಬನಿಗೆ ಮಾತ್ರ ಹೇಳಿದ್ದಾಳೆ.

**ಮಾಧವ** - ಅಂತೂ ಗತಭರ್ತೃಕೆಯಾದ ತಂಗಿಯು ಸಲುವಾಗಿ ಒಂದು ದೊಡ್ಡದಾದ ಬೇಟೆಯನ್ನಾಡುವಾಲೋಚನೆಯಿಂದ ಶಾಸ್ತ್ರ ಮನೆಹೊರಗೆಬಿದ್ದಂತೆ ಕಾಣುತ್ತೆ! ತಮ್ಮ ಪಿತೃಗಳಾದ ಹಿರಣ್ಯಗರ್ಭಾಚಾರ್ಯರು ಅವಳನ್ನು ಆ ಮುದುವ ಭುಜಂಗ ಸರಾಫನ ಕೊರಳಿಗೆ ಹಾಕಿ ನಾಲ್ಕುಸಾವಿರ ರೂಪಾಯಿಗಳ ನ್ನೆತ್ತಿ ಕೊನೆಗೆ ಅವನ ಸಮಾಧಿಯನ್ನು ಮಾಡಿದರು. ತಾವು ಈಗ್ಗೆ ಗತಭರ್ತೃಕೆ ಯಾದರೂ ಚಿಂತೆಯಿಲ್ಲ, ಇದೊಂದು ಪುನರ್ವಿವಾಹದಾಟವನ್ನು ಹೂಡಿ ಅದಕ್ಕೂ ದೊಡ್ಡದಾದ ಲಾಭವನ್ನು ಪಡೆಯಬೇಕೆಂದು ನಮ್ಮ ಕೊರಳಲ್ಲಿ ಕಟ್ಟಿ ಬಂದಿರು ವಿರೋ? ಇದಕ್ಕಾಗಿಯೇ ಅವಳನ್ನಿಷ್ಟು ದಿನಗಳತನಕ ಸಕೇಶಿಯಾಗಿಟ್ಟಂತೆ ಕಾಣುತ್ತದೆ. ತಂದೆ ಮಕ್ಕಳಾದ ನಿಮ್ಮೀರ್ವರಿಗೂ ಧನಪಿಶಾಚಿಯು ಒಳ್ಳೇ ಗಂಟು ಬಿದ್ದಿದೆ. ಥೂ ನಿಮ್ಮ ಬಾಳು ಹಾಳಾಗಾ, ಇನ್ನುಮೇಲೆ ಮೆಲ್ಲಮೆಲ್ಲನೇ ಹಣದಾಸೆಗಾಗಿ ಅವಳನ್ನು ತಾರುಣ್ಯ ವಿಕ್ರಯ ಕಾರ್ಯಕ್ಕೆ—

**ಪದ್ಮ**— ಸಾಕುಮಾಡಿ ಹೆಚ್ಚಾಗಿ ಮಾತುಗಳನ್ನು ಬೆಳಿಸುವ ಕಾರಣವಿಲ್ಲಾ

**ಶಾರದೆ** — (ಥಕ್ಕನೇ ಬಂದು ಪತಿಯ ಪಕ್ಷಗಟ್ಟಿ) ಅಣ್ಣಾ ಏನಿದು? ಅವರಮೇಲೆ ಇಷ್ಟು ಕೋಪ?

**ಮಾಧವ**— (ಬೆಚ್ಚಿಬಿದ್ದು) ಅಯ್ಯಯ್ಯೋ ಈಗ್ಗೆ ಇದೆತ್ತಿಂದ ಬಂತರಿಪ್ಪಾ? ಎದೆಯು ಧಡಧಡಾ ಬಡೆದುಕೊಳ್ಳಲಾರಂಭಿಸಿತು! ಆದರೂ ಧೈರ್ಯವನ್ನು ಬಿಟ್ಟು ಪ್ರಯೋಜನವಿಲ್ಲಾ.

**ಪದ್ಮ**— ಶಾರದೇ ನೀನು ಸರ್ವಸ್ವೀ ವಂಚಿತಳಾದೆ! (ದುಃಖದಿಂದ) ತಂಗೀ ಎಂತಹ ರಾಕ್ಷಸನನ್ನು ನಂಬಿದೇ?

**ಶಾರದಾ**— ನಾಥಾ, ಅಣ್ಣನು ಹೀಗೇನು ಹೇಳುವನು?

**ಮಾಧವ** — ಅಬ್ಬಾ! ಗುಲ್ಲುಗಂಟೇ ಯಾರಿಗೆ ನೀನು ನಾಥಾ ಎಂದು ಹೇಳುವೇ?

**ಶಾರದಾ—** ಪ್ರಿಯಾ ? ಹೀಗೇನು ಕಠೋರ ಮಾತುಗಳನ್ನಾಡುವೀ ? ನಾನು ನಮ್ಮ ಪುನರ್ವಿವಾಹದ ಸಮಾಚಾರವನ್ನು ಅಣ್ಣನಿಗೆ ಮಾತ್ರ ತಿಳುಹಿಸಿದ್ದೇನೆ. ಸಂಕೋಚಪಡುವ ಕಾರಣವಿಲ್ಲ. ಅಣ್ಣಾ ಅಂದು ಅಸ್ತಾಚಲವನ್ನೈದುವ ಸೂರ್ಯನಾರಾಯಣನ ಸಾಕ್ಷಿಯಾಗಿ ಪ್ರಿಯತಮನು ನನಗೆ ಕೊಟ್ಟ ಅಭಯವಚನದ ಸುಸ್ವರವು ಈಗಲೂ ಕಿವಿಯಲ್ಲಿ ಕೇಳಿಸುವದು ನೋಡೊ ?

**ಮಾಧವ—** ಓಹೋ ನಿನ್ನ ಹೆಸರು ಶಾರದೆಯಲ್ಲವೇ (ದೇವಲರ ಶಾರದೆ). ಮತ್ತಾವ ತಿರಿಮಣ್ಣವ ಬ್ರಹ್ಮನನ್ನಾದರೂ ನೋಡಿಕೊಳ್ಳಬಾರದಿತ್ತೇ ? ನಾನೇನು ನಿನ್ನ ಬ್ರಹ್ಮನಾಗಲಾರೆ.

**ಶಾರದಾ—** ನನ್ನ ಸೌಭಾಗ್ಯನಿಧೇ ?

**ಮಾಧವ—** ಅದೆಲ್ಲಿದೇ ? ಅದೆಂದೋ ಭುಜಂಗ ಸರಾಫನ ಹೆಣದಗೂಡ ಸುಟ್ಟುಹೋಗಿದೆ.

**ಶಾರದಾ—** ಮನೋಹರಾ ಇಂದು ಹೀಗೇಕೆ ಮಾತುಗಳನ್ನಾಡುವೀ ? ನಿನ್ನ ಮುಖದೊಳಗಿನ ಆ ಮಂದಸ್ಮಿತವೆತ್ತ ಹೋಯಿತು ? ಮಾತಿನೊಳಗಿನ ಸವಿ ಏನಾಯಿತು ? ಭಾವದೊಳಗಿನ ಮಮತೆಯಲ್ಲೀ ? ಇದೋ ನಿನಗೆ ಶಿರಗೊಡ್ಡಿ ಬೇಡಿಕೊಳ್ಳುವೆನು ದಯಮಾಡಿ ಈ ಕಠೋರವೃತ್ತಿಯನ್ನು ಬಿಟ್ಟು ಅಣ್ಣನನ್ನು ಸಂತೈಸು.

**ಮಾಧವ—** ಏ ಸೋಗಲಾಡೀ ನೀನು ಹೂಡಿರುವ ನಾಟಕವಾವದು ? ಹೆಂಗಸಾಗಿ ಎಷ್ಟು ನಾಚಿಕೆಯನ್ನು ಬಿಟ್ಟು ಮಾತುಗಳನ್ನಾಡುವಿ ? ಗತಿಗೆಟ್ಟ ಜೀವಿಗಳಾದ ನೀವು ಹೀಗೆ ನಮ್ಮಂಥವರ ಮೇಲೆ ಮುರಿದುಬೀಳುವದೊಳಿತೇ ? ವಿಧವೆಯಾದ ನಿನ್ನನ್ನು ಮದುವೆಯಾಗಲಿಕ್ಕೆ ನನಗೇನು ಹೆಣ್ಣುಗಳು ಸಿಗುತ್ತಿದ್ದಿಲ್ಲವೇ ? ಏನು ಹೀಗೆ ಅಮಂಗಲ ಮಾತುಗಳನ್ನು ಬಳಿಸಿದರೇ ? ಪದ್ಮನಾಭಾಚಾರ್ಯರೇ ನಾಲ್ಕು ದಿನ ನಿಮ್ಮ ತಂದೆಗಳಲ್ಲಿ ನಾನು ಸಂಸ್ಕೃತಾಧ್ಯಯನಮಾಡಿಕೊಂಡದಕ್ಕೆ ಉಪಾಯಗಾಣದೇ ತಡದಿದ್ದೇನೆ, ಮತ್ಯಾರಾದರೂ

ನನ್ನಗೂಡ ಈ ಆಟವನ್ನು ಹೂಡಿದ್ದರೇ ಇಷ್ಟು ಹೊತ್ತಿನಲ್ಲಿ ಆಳುಗಳಿಂದ ಅರ್ಧಚಂದ್ರಪ್ರಯೋಗವಮಾಡಿಸಿಬಿಡುತ್ತಿದ್ದೆ. ಹೋಗಿ ಹೋಗಿ ದಯಮಾಡಿಸಿ. ವೈದಿಕರಾದ ನೀವು ಎಷ್ಟು ಶ್ರೇಷ್ಠರೆನಿಸಿಕೊಳ್ಳುತ್ತಿದ್ದಿರೋ ಅಷ್ಟು ಕನಿಷ್ಠರಾದಿರಿ. ಥೂ ಥೂ ನಿಮ್ಮ ಮುಖಗಳಿಗೆ ಬೆಂಕೆಯಿಕ್ಕು. ಮೊದಲು ನೀವೀರ್ವರೂ ಇಲ್ಲಿಂದ ಹೊರಟುಹೋಗಿರಿ, ಪಾಪಿಗಳಾದ ನಿಮ್ಮ ಮುಖಗಳನ್ನು ನಾನು ನೋಡೆನು.

**ಪದ್ಮ** — ತಂಗೀ ಇನ್ನೇನು ಮಾಡುವೀ ?

**ಶಾರದಾ** — (ಅಳುತ್ತ) ನಾಥಾ ವ್ಯರ್ಥವಾಗಿ ನನ್ನನ್ನು ಕೊಲ್ಲಬೇಡ. ನಾನು ಗರ್ಭಿಣಿಯಾಗದಿದ್ದರೇ ಪುನರ್ವಿವಾಹ ಶಿಷ್ಟಾಚಾರಕ್ಕಾಗಿ ಇಷ್ಟು ಆತುರವನ್ನೇ ಮಾಡುತ್ತಿರಲಿಲ್ಲ. ತನ್ಮನುಗ್ರಹದಿಂದ ಗರ್ಭಿಣಿಯಾಗಿದ್ದೇನೆ. ಜನಾಪವಾದವನ್ನು ತಪ್ಪಿಸಿಕೊಳ್ಳುವದಕ್ಕಾಗಿ ಲೌಕಿಕ ವಿವಾಹವಿಧಿಯನ್ನಷ್ಟು ತೀರಿಸಿಕೊಂಡುಬಿಡು ನಿನ್ನ ಕಾಲುಗಳನ್ನು ಹಿಡಿಯುವೆನು. (ಕಾಲುಹಿಡಿಯುವಳು ಮಾಧವನು ಒದಿಯುವನು ಗರ್ಭಕ್ಕೆ ಪೆಟ್ಟುತಾಕಿ ವ್ಯಥೆಯಿಂದ ಉರಳಾಡುವಳು).

**ಮಾಧವ** — ಛೀ ನಡಿಯೋ ಹೇಸಿಮುಂಡೇ, ವ್ಯಭಿಚಾರಿಣೀ. ಪದ್ಮನಾಭಾಚಾರ್ಯರೇ ನೀವಿಂಥ ಸಾಹಸಿಗಳೆಂದು ನಾನೆಣಿಸಿದ್ದಿಲ್ಲ. ಗರ್ಭಿಣಿಯಾದ ವಿಧವೆಯನ್ನು ನನ್ನ ಕೊರಳಲ್ಲಿ ಕಟ್ಟಬಂದಿರುವಿರೋ ? ಯಾವನು ಇವಳಿಗೆ ಗರ್ಭಾದಾನವನ್ನು ಮಾಡಿರುವನೋ ಅವನ ಕೊರಳಲ್ಲಿಯೇ ಕಟ್ಟಿಹೋಗಿ.

**ಶಾರದಾ** — (ಶಿಟ್ಟಿನಿಂದ) ಆ ಪುರುಷನು ನೀನೇ ?

**ಮಾಧವ** — ಥೂ, ಪಿಶಾಚಿ, ನಾಲಿಗೆಯು ಕಳಚಿಬಿದ್ದೀತು. ನಮ್ಮಂಥವರ ಹಲುವಾಗಿ ಇಂತಹ ಮಾತುಗಳನ್ನಾಡಿದರೆ-ಅಥವಾ ನಿನಗೇತರ ಭಯ. ಹಂಗು ಹರಿದು ನಿಂತಿರುವಿ. ಏ ಆಚಾರೀ ಇವಳನ್ನು ಕಟ್ಟಿಕೊಂಡು ನೀ-ನೀ-ಅರಕ್ಷಣದಲ್ಲಿ ಇಲ್ಲಿಂದ ಹೋಗುವಿಯೋ ಇಲ್ಲವೊ ? ಆಲೋಚನೆಯನ್ನೇನುಮಾಡುವೀ?

**ಪದ್ಮ** — ನಡೆ ಹತಭಾಗ್ಯೆ ನಡೆ ನಿನ್ನ ದೈವದಲ್ಲಿದ್ದದ್ದಾಗಲಿ. (ದಬ್ಬಿಕೊಂಡು ಹೋಗುವಾ)

**ಶಾರದಾ—** ನನ್ನನ್ನೀಪರಿ ಕಷ್ಟಕ್ಕೆ ಗುರಿಮಾಡಿದಿಯಾ? ನರಾಧಮಾ—

**ಮಾಧವ—** ನಾಲಿಗೆಯನ್ನು ಬಿಗಿಹಿಡಿ ಅವಾಚ್ಯವಾಡುವಿಯಾ?

**ಶಾರದಾ—** ಬೇಕಾದರೆ ನನ್ನನ್ನು ಕೊಂದುಹಾಕು. ನಾನೇನು ಹೆದರುವದಿಲ್ಲ. ಪಾಪೀ ಮನದಲ್ಲಿಂಥ ಕಾಲಕೂಟ ವಿಷವನ್ನು ತುಂಬಿಕೊಂಡು ಕೇವಲ ನಿನ್ನ ಕಾಮವಾಸನೆಯ ತೃಪ್ತಿಗಾಗಿ ಮುಖದಿಂದಮೃತವನ್ನು ಸುರಿಸಿ ನನ್ನ ಕುತ್ತಿಗೆಯನ್ನು ಕೊಯ್ದಿಯಾ? ರಾಕ್ಷಸಾ ನಿನ್ನ ಪಿತೃಗಣವೆಲ್ಲಾ ರೌರವ ನರಕವನ್ನು ಸೇರಲಿ, ನಿನ್ನ ವೈಭವವೆಲ್ಲಾ ಮಣ್ಣುಪಾಲಾಗಲಿ. ನೀನು ಮಹಾರೋಗಪೀಡಿತನಾಗಿ ಕೊಳೆತು ಕೊಳೆತು ಬೀದಿಯ ಹೆಣವಾಗಿ ಸಾಯಿ. (ಮಣ್ಣು ತೂರುವಳು)

## ಪ್ರಥಮಾಂಕ ಸಮಾಪ್ತ





ಮಾಧವರಾಯ. ಶಾರದಾ. ಪದ್ಮನಾಭ.

ಶಾರದಾ:— ನೀನು ಮಹಾರೋಗಪೀಡಿತನಾಗಿ ಕೊಳೆತು ಕೊಳೆತು ಬೀದಿಯ ಹೆಣವಾಗಿ ಸಾಯಿ !

[ಪುಟ ೨೦.

# ೨ನೆಯ ಅಂಕ

## ೧ನೆಯ ಪ್ರವೇಶ

( ಅಹಮ್ಮದಾಬಾದ, ಸಾಬರಮತಿ ಆಶ್ರಮದ ಹೆಬ್ಬಾಗಿಲಹತ್ತರ. ಹಿರಣ್ಯಗರ್ಭಾಚಾರ್ಯರು ನಾಗಾಭಟ್ಟರು ಮತ್ತು ರಮಾಬಾಯಿಯವರು ಕಾಶೀಯಾತ್ರೆಯಿಂದ ಮರಳಿ ಬರುವಾಗ್ಗೆ—)

**ನಾಗಾ—** ಸ್ವಾಮೀ ಹಿರಣ್ಯಗರ್ಭಾಚಾರ್ಯರೇ ಸುಮ್ಮನೇ ನೋಡಿ ಬರುವದರಿಂದ ನಮಗಾಗುವ ನಷ್ಟವೇನು? ದೇಶದ ಹೊಲೆಹದಿನೆಂಟು ಜಾತಿಯು ಜನಗಳು ಈತನ ಬೆನ್ನುಹತ್ತಿರುವರೆಂದ ಬಳಿಕ ಈತನಲ್ಲಿ ಇರುವದಾದರೂ ಏನು?

**ರಮಾ—** ಅನಾಯಾಸವಾಗಿ ಬಂದಿದ್ದೇವೆ. ನೋಡಿಕೊಂಡೇ ಹೋಗುವ. ನಮ್ಮ ಪದ್ಮನಾಭನು ಈತನ ವಿಷಯದಲ್ಲಿ ಬಹುವಾಗಿ ಹೇಳುವನು.

**ಹಿರಣ್ಯ—** ಹಾಗೆ ಹೇಳಿಹೇಳಿ ವರ್ಕಶಾಪಿನ ದೊಡ್ಡ ಸಂಬಳದ ನೌಕರಿಯನ್ನು ಬಿಟ್ಟು ಮನೆಯಲ್ಲಿ ಮಗ್ಗಗಳನ್ನಿಟ್ಟುಕೊಂಡು ಕುಳಿತಿದ್ದಾನೆ. ನೇಕಾರರಂತೆ ಮೂಲೆಗುಂಪಾಗಿ.

**ನಾಗಾ—** ನಿಮ್ಮ ಮಗನಾದರೂ ಕೆಲದಿನಗಳ ತನಕ ನೌಕರಿಯನ್ನು ಮಾಡಿ ದುಡಿದು ತಂದು ನಿಮ್ಮನ್ನು ಜೋಪಾನಮಾಡಿದನು. ಆದರೇ ನನ್ನ ಮಗಾ ಭಗೀರಥಾ ಈ ದೊಡ್ಡ ಮನುಷ್ಯನ ಸಂದೇಶವಂತೆ ಸಂದೇಶಾ, ಅದನ್ನು ಕೇಳಿ ಕಾಲೇಜಬಿಟ್ಟು ಮನೆಯಲ್ಲಿ ಬೋರಬಿಲ್ಲೇ ಹಿಡಿದು ಜನಿವಾರದ ನೂಲು

ತೆಗೆಯುತ್ತ ಕುಳಿತಿದೆ ನೂಲು. ನಾಲ್ಕು ಹಿತದ ಮಾತುಗಳನ್ನು ಹೇಳಹೋದರೇ ಮೂರು ಮೂರುದ್ಧ ಮಾತುಗಳನ್ನಾಡಿ ತಿರುಗಿ ಬುದ್ಧಿಗಲಿಸಲಿಕ್ಕೆ ಬರುವದು.

**ಹಿರಣ್ಯ—** ನಿಮ್ಮ ಮಗನು ಕಾಲೇಜಕ್ಕೆ ಶರಣುಹೊಡೆದನೇನು ? ಈ ವರ್ತಮಾನ ನಮಗೆ ತಿಳಿಸೇ ಇಲ್ಲವಲ್ಲ ?

**ನಾಗಾ—** ಮತ್ತೆ ಇಷ್ಟು ಹೊತ್ತಿನತನಕ ಹೇಳಿದ್ದೇನು ?

**ಹಿರಣ್ಯ—** ಅಯ್ಯೋ ಪಾಪಾ ನೀವು ನಿಮ್ಮ ಸರ್ವಸ್ವವನ್ನೆಲ್ಲಾ ಹಾಳುಮಾಡಿ ಕೊಂಡು ಅವನಿಗೆ ವಿದ್ಯೆಯನ್ನು ಹೇಳಿಸಿದ್ದಿರಲ್ಲವೇ ?

**ನಾಗಾ—** ಅದಕ್ಕೆ ಪ್ರತಿಫಲವಾಗಿ ಮುಪ್ಪಿನ ಕಾಲಕ್ಕೆ ಮುಂಗೈಗೆ ಜೋಳಿಗೆ ತಂದನು ಸ್ವಾಮೀ ಮಾಡುವದೇನು ನಮ್ಮ ಭೋಗವೇ ಹೀಗಿದೆ.

**ಹಿರಣ್ಯ—** ನಮ್ಮ ನಿಮ್ಮ ಮಕ್ಕಳ ಸುದ್ದಿಯನ್ನು ಬಿಡಿ, ಯಾಕಂದರೇ ಇವರಿನ್ನೂ ಚಿಕ್ಕವರು. ತಿಳಿದವರು, ಯುಷ್ಟೋ ಕಾಲ ಕಳೆದವರು, ಹತ್ತುಹತ್ತು ಸಾವಿರಗಟ್ಟಲೆ ಸಂಪಾದನೆಮಾಡುವ ಈ ವಕೀಲರಿಗೇನು ಬೇನೆ ಬಂತೂ ಅಂದೆ. ಪಟಪಟನೇ ವಕೀಲಿಯನ್ನು ಬಿಟ್ಟು ಹಚ್ಚಡದಂಗಿಯನ್ನು ಹಾಕಿಕೊಂಡು ಎಲ್ಲರೂ ಹೀಗೆಯೇ ಮಾಡಿರೆಂದು ಹೇಳುತ್ತ ತಿರುಗಾಡುವರಲ್ಲಾ ಅದಕ್ಕೇನು ಹೇಳುವಿರೀ?

**ರಮಾ—** ನಿನ್ನೆ ತ್ರಿವೇಣೀ ಸಂಗಮದಲ್ಲೊಂದು ಕುಟುಂಬದವರನ್ನು ನೋಡಲಿಲ್ಲವೇ ಅವರು ಅದೇ ಊರವರಂತೆ.

**ನಾಗಾ—** ಅವರಲ್ಲಿ ಆ ಹಿರಿಯ ಮನುಷ್ಯ ಬಿಳೇ ಮೀಶಿಯುವ ಬಹುದೊಡ್ಡ ವಕೀಲನಂತೆ, ಅವನ ಹೆಸರು ಲಾಲಮೋತಿ ನೆಹರು ಅಂತೆ.

**ಹಿರಣ್ಯ—** ಅಯ್ಯೊ! ಅಯ್ಯೊ! ಲಾಲಮೋತಿ ಅಲ್ಲರಿ. ಮೋತಿಲಾಲ ನೆಹರು.

**ನಾಗಾ—** ಮೋತಿಲಾಲ ಏನು, ಲಾಲಮೋತಿ ಏನು ಎಲ್ಲವೂ ಒಂದೇ.

**ರಮಾ—** ತಿಳುವಾದ ರೇಶ್ಮೆಬಟ್ಟೆಗಳು ಸಹಾ ಅವರಿಗೆ ಒಜ್ಜೆಯಾಗು

ತ್ತಿದ್ದವಂತೆ ! ಅಂಥವರು ಕೂಡಾ ಲವಣಿಗೆಗಳಂತೆ ಹಚ್ಚಡವನ್ನುಟ್ಟುಕೊಂಡಿದ್ದ ರಲ್ಲವೇ.

**ಹಿರಣ್ಯ—** ಅದೆಲ್ಲಾ ಈ ಆಶ್ರಮದೊಳಗಿರುವ ಕಲಿರಾಯನ ಪ್ರತಾಪ.

ಇಳಿದ ಕಲಿರಾಯ ತಾ ನಿಳಿಗೆ ನಿಃಸಂಶಯ ಪ್ರಳಯಕಾಲವತರಿಸುವಾ ।
ಕುಲಗಳುಳಿಸದೆ ಕಲಿಸಿ ಮೊಲೆಮಾದಿಗರನೆಲ್ಲ ಬಲು ಮಾಯಬೋಧದಿಂದಾ ॥
ಸಲೆವೇದ ಶಾಸ್ತ್ರಾದಿಗಳ ನೋಡಿ ಪಾಂಡಿತ್ಯ । ಗಳಿಸಿದಂತಹರೆಲ್ಲರೂ ।
ಇಲಿಗಳಂದದಿ ಇವನ ಬಲೆಗೆ ಪಟಪಟ ಬಿದ್ದು ಕುಲಗೆಟ್ಟು ಪೋಪರಂತೆ ॥
ಮಾದಿಗರ ಕರದನ್ನನೀರು ಕೊಳ್ಳುವನಂತೆ ಮದನಮೋಹನ ಮಾಳ್ಪಿಯಾ
ಅದಭೂತ ಕರ್ಮಠ ಬ್ರಾಹ್ಮಣನು ತಾ ಸಹಿತ ಬಿದ್ದನಂತಿವನ ಬಲೆಗೆ ॥

**ನಾಗಾ—** ಸ್ವಾಮೀ ಇದೇನೋ ಒಂದು ನಾಲ್ಕಾಣೆ ಬಿಳಿ ಟೊಪ್ಪಿಗೆಯನ್ನು ತಲೆಗೇರಿಸಿ ದೊಡ್ಡಿಸ್ತಿಕೆಯನ್ನು ಪಡೆಯುವ ಸಂದರ್ಭ ಉಂಟಾಗಿದೆ. ಗಳಿಸಿ ಗತ್ತುರಿಸಿದ ಶ್ರೀಮಂತರು ಅಂಥವೆಲ್ಲ ಸೋಗುಗಳನ್ನು ಹಾಕಿದರೆ ಚಂದ ಕಂಡೀತೂ ಅನ್ನಿ. ನಮ್ಮಂಥ ಹೊಟ್ಟೆಗೆ ಹಿಟ್ಟಿಲ್ಲದವರಿಗಿವೆಲ್ಲ ಏಕೆ ಬೇಕು ಸ್ವಾಮಿ ! ನವಿಲು ಕುಣಿಯುವದೆಂದು ಬೋಳಾದ ಶಾಬತ್ತು ಕುಣಿದರೇ ಚಂದ ಕಂಡೀತೇ ?

**ವ್ಹಾಲಂಟಿಯರ—** ( ಬಂದು ವಿನಯದಿಂದ ನಮಿಸಿ ) ಸ್ವಾಮೀ ಆಶ್ರಮವನ್ನು ನೋಡಲು ಬಂದಿರುವಿರೋ ? ದಯಮಾಡಿಸಿ, ದಯಮಾಡಿಸಿ ಮಹಾತ್ಮರಿಗೆ ವಿರಾಮಕಾಲವಿದೆ. ಅನಾಯಾಸವಾಗಿ ದರ್ಶನವಾಗುವದು.

**ನಾಗಾ—** ( ತಮ್ಮೊಳಗೆ ) ವಿನಯದಲ್ಲಿವರು ಪಾದ್ರೀ ಜನಗಳಿಗಿಂತಲೂ ಒಂದು ತೂಕ ಹೆಚ್ಚಾಗಬಹುದು. ಏಕೆ ಹಿರಣ್ಯಗರ್ಭಾಚಾರ್ಯರೇ ?

**ವ್ಹಾಲಂಟಿ—** ತಮ್ಮ ಸಾಮಾನುಗಳನ್ನು ಕೊಡಿ. ನಾನು ಹೊತ್ತುಕೊಳ್ಳುವೆನು. ಮುಪ್ಪಿನವರಾದ ತಮಗೆ ಅವು ವಜ್ಜೆಯಾಗಿರಬಹುದು. ಕಾಶೀ ಯಾತ್ರೆಗೆ ಹೋಗಿದ್ದಿರೇನು ?

**ನಾಗಾ—** ಅಹುದಪ್ಪಾ. ಹಾಗಾದರೇ ತೆಗಿದುಕೋ ( ಕೊಡುತ್ತಿರುವಾಗ್ಗ ).

**ಹಿರಣ್ಯ**— ಮೊದಲು ಕೂಲಿಯ ನಿಷ್ಕರ್ಷೆ ಮಾಡಿಕೊಂಡು ಆ ಮೇಲೆ ಕೊಡಿ. ಇಲ್ಲವಾದರೇ ಬೇರೆ ಕೂಲಿಗಳಂತೆ ಜಗ್ಗಾಟವು ನಡದೀತು !

**ವ್ಯಾಲಂಟಿ**— ಛೀ ಛೀ ಚಿಂತಿಸಬೇಡಿ. ನಾವು ಕೂಲಿನಾಲೆ ತಕ್ಕೊಳ್ಳುವವರಲ್ಲ ಸ್ವಯಂಸೇವಕರಿದ್ದೇವೆ.

**ಇಬ್ಬರೂ**— ( ಪರಸ್ಪರ ನೋಡಿ ಆಶ್ಚರ್ಯದಿಂದ ) ಇದೊಂದು ಹೊಸ ಶಬ್ದವೇ ಸ್ವಯಂಸೇವಕಾ !!!

**ರಮಾ**— ( ವಾತ್ಸಲ್ಯಭಾವ ) ಪಾಪ ಹುಡುಗ ಎಷ್ಟು ಪ್ರೇಮದಿಂದ ಹೇಳಿಕೊಳ್ಳುತ್ತಾನೆ. ಕೊಡಿ ಕೊಡಿ ಹಸುವೆಗಳನ್ನು ( ನಾಗಾಭಟ್ಟರು ಕೊಡುವರು )

**ವ್ಯಾಲಂಟಿ**— ತಮ್ಮುಭಯತರ ಗಂಟುಗಳನ್ನೂ ಕೊಡಿರಿ.

**ಹಿರಣ್ಯ**— (ತಮ್ಮ ಗಂಟನ್ನು ಅವನ ಮೇಲೆ ಹೊರಿಸುತ್ತ ) ಇದೋ ತಮ್ಮಾ ಈಗ್ಗೆ ಒಳ್ಳೆ ಮಾತುಗಳನ್ನಾಡಿ ನಮ್ಮ ಗಂಟುಗಳನ್ನು ಹೊತ್ತು ಆಮೇಲೆ ಅಷ್ಟು ಕೊಡೀ ಇಷ್ಟು ಕೊಡೀ ಎಂದು ತಿಕ್ಕಾಟವನ್ನು ಮಾಡಲಾಗದು !

**ವ್ಯಾಲಂಟಿ**— ಹಾಗೆ ತಮಗೆ ಅವಿಶ್ವಾಸವಿದ್ದರೇ ಇಗೋ ( ಜೇಬಿನಿಂದ ರೂಪಾಯಿ ತೆಗೆಯುತ್ತ ನಾಗಾಭಟ್ಟರ ಕೈಯಲ್ಲಿ ಕೊಟ್ಟು ) ಈ ರೂಪಾಯಿಯನ್ನು ತಮ್ಮ ಹತ್ತರ ಇಟ್ಟುಕೊಳ್ಳಿರಿ. ನಾನು ನುಡಿದಂತೆ ನಡೆದ ಮೇಲೆ ತಿರುಗಿ ಕೊಡಿರಿ.

**ಹಿರಣ್ಯ**— ಹಂ ಹಂ ಬಾರಿಸಿ ತಕ್ಕೊಳ್ಳಿ ! ಖೊಟ್ಟಿಯನ್ನುಮರಿಸಿ ಒಳ್ಳೇ ರೂಪಾಯಿಯನ್ನು ಕೊಡಿರೆಂದು ಗಂಟುಬಿದ್ದಾನು !

**ನಾಗಾ**— ( ಬಾರಿಸಿ ) ಏ ಏ ಚನ್ನಾಗಿದೆ. ಏನಯ್ಯಾ ಈಗ್ಗೆ ನಮ್ಮನ್ನೆತ್ತ ಕರೆದುಕೊಂಡು ಹೋಗುವೀ ?

**ವ್ಯಾಲಂಟಿ**— ಸೆಟ್ಟಿಗೆ ಮಹಾತ್ಮರ ಪರ್ಣಕುಟೀರಕ್ಕೆನೇ ಕರೆದೊಯ್ಯುವೆನು. ಬನ್ನಿ ( ಹೋಗುವಾ )

**ಹಿರಣ್ಯ**— ಸ್ವಾಮೀ ನಾಗಾಭಟ್ಟರೆ, ಸ್ಮಾರ್ತಬ್ರಾಹ್ಮಣರಾವ ನಿಮ್ಮ

ವಿಷಯವೇನಷ್ಟು ಮಹತ್ವದ್ದಲ್ಲ! ಕೇವಲ ತಾರತಮ್ಯಾನುಸಾರವಾಗಿ ನಡೆಯುವ ವೈಷ್ಣವರಾದ ನಮ್ಮಗಳ ಅವಸ್ಥೆಯು ಮಾತ್ರ ಚನ್ನಾಗಿಲ್ಲ !

**ನಾಗಾ—** ಅದೇನು ಮತ್ತೇ ?

**ಹಿರಣ್ಯ—** ಜಗವೆಲ್ಲವೂ ಈ ವೈಶ್ಯನನ್ನು ಮಹಾತ್ಮಾಜೀ ಮಹಾತ್ಮಾಜೀ ಎಂದು ಚೀರಿ ಬಿಟ್ಟಿದೆ. ಹೋದ ತಕ್ಷಣವೇ ಅವನು ನಮಗೆ ಯೋಗ್ಯ ಆದರ ವನ್ನು ಮಾಡದೇ ತಾನು ಉಚ್ಚಸ್ಥಾನದಲ್ಲಿ ಕುಳಿತು ನಮ್ಮನ್ನು ಕೆಳಗೆ ಕುಳ್ಳಿರಿಸಿದರೇ ವ್ಯರ್ಥವಶ್ಯ ವೈದಿಕರಾದ ನಮ್ಮಗಳ ತೇಜೋಭಂಗವಾಗಲಿಕ್ಕಿಲ್ಲವೇ ?

**ನಾಗಾ—** ಪ್ರಯಾಗ ಸ್ಟೇಶನಿನಲ್ಲಿ ಆ ಕಿರಸ್ತಾನ ಟಿಕೀಟ ಕಲೆಕಟರನು ಮಾಡಿದಷ್ಟೇನು ತೇಜೋಭಂಗವಾಗಲಿಕ್ಕಿಲ್ಲ ಬನ್ನಿ ಸ್ವಾಮೀ !

**ದಿವಾ—** ಅವನ ಮನೆ ಹಾಳಾಗಾ ನಮ್ಮ ಯಜಮಾನರ ಕತ್ತಿಗೆ ಕೈ ಕೊಟ್ಟು ದೂಡಬೇಕೇ !

**ಹಿರಣ್ಯ—** ಅದು ವ್ಯವಹಾರವಾಯಿತು.

**ನಾಗಾ—** ಇಲ್ಲೇನು ತಾವು ಹೆಣ್ಣುಗಂಡಿನ ಸಲುವಾಗಿ ಬಂದಿರುವಿರಿ ? ಆದರೂ ಆಚಾರ್ಯರಾದ ತಾವು ಆಗರ್ಭ ಧೈರ್ಯಶಾಲಿಗಳು ! ಮಹಾತ್ಮರು ಆಡೆಯುವರಿದ್ದರೂ ಹಾಗೆಯೇ ಆಶಿರ್ವಾದಗಳನ್ನು ಒಗೆಯುತ್ತ ಒಗೆಯುತ್ತ ಅವನ ಎತ್ತರವೇ ನುಗ್ಗಿ ಸರಿಸಿ ಕುಳಿತುಕೊಳ್ಳುವ ಬಲಿಷ್ಠರಲ್ಲವೇ. ( ವ್ಹಾಲ–ತೆರೆಯಲ್ಲಿ ಬನ್ನಿ ಬನ್ನಿ ಸ್ವಾಮೀ ತಡಮಾಡಬೇಡಿರಿ )

**ಹಿರಣ್ಯ—** ಅಯ್ಯೋ ಆ ಮೊಟ್ಟೆ ಹೊತ್ತವನು ದೂರ ಹೋದಾ ! ಅಡ್ಡಹಾದಿ ಹಿಡಿದಾನು. ಇದ್ದ ಬಿದ್ದದ್ದನ್ನೆಲ್ಲ ಕಳೆದುಕೊಳ್ಳಬೇಕಾದೀತು ನಡೆಯಿರಿ ತೀವ್ರ ( ಹೋಗುವರು )

---

# ೨ನೆಯ ಪ್ರವೇಶ

( ಮಹಾತ್ಮಾಜೀ ಗುಡಿಸಿಲ ಮುಂಭಾಗ )

**ಶಾರದಾ—** ( ವಾತ್ಸಲ್ಯದಿಂದ ಆನಂದಬಾಷ್ಪಯುಕ್ತಳಾಗಿ ) ಅಹಹಾ ಅವರೇ ನನ್ನ ಮಾತಾಪಿತೃಗಳು. ಹದಿನೇಳು ವರ್ಷಗಳ ನಂತರದಲ್ಲಿ ನನಗವರ ದರ್ಶನ ವಾಗುತ್ತಲಿದೆ. ಪ್ರೇಮವು ಉಕ್ಕಿ ಬರುತ್ತಿರುವದು. ಹೋಗಿ ಅವರನ್ನಪ್ಪಿಕೊಳ್ಳಲೋ ? ಛೀ ಇದೇನ ವಿಚಾರ ಅವರ ದೃಷ್ಟಿಯಿಂದ ನಾನು ಪತಿತಳು. ಏತಕ್ಕೆ ಅವರಿಗೆ ನಾನು ನನ್ನ ಗುರ್ತನ್ನು ಕೊಡಬೇಕು ? ನನ್ನ ಪಾಲಿಗವರು ಅವರ ಪಾಲಿಗೆ ನಾನು ಇದ್ದರೂ ಸತ್ತಂತೆಯೋ ! ಉ. ಅದೇನೇ ಆಗಲೀ ಬದುಕಿರುವಾಗಲೇ ಒಮ್ಮೆ ಹಡೆದವರ ದರ್ಶನವಾಯಿತು. ಈ ದುರ್ಭಾಗ್ಯಳಿಗಷ್ಟೇ ಸಂತೋಷ. ( ಕುಮಾರ ಬರುವ ) ಏನು ಕುಮಾರ ಆ ಬಂದ ಜನಗಳಿಗೆ ಅಪ್ಪಾಜಿಯವರ ದರ್ಶನ ಮಾಡಿಸಿದೆಯಾ ?

**ಕುಮಾರ—** ಮಾಡಿಸಿದೆನು. ಅವರು ಅಲ್ಲಿಯೇ ಅಪ್ಪಾಜಿಯುವರ ಜೊತೆಯಲ್ಲಿ ಮಾತಾಡುತ್ತ ಕುಳಿತಿದ್ದಾರೆ.

**ಶಾರದಾ—** ಅವರಾವ ದೇಶದವರು ?

**ಕುಮಾರ—** ಕರ್ನಾಟಕದವರಂತೆ ಕಾಶೀಯಾತ್ರೆಗೆ ಹೋಗಿದ್ದರಂತೆ. ಅವರು ಅಪ್ಪಾಜಿಯುವರೊಡನೇ ಬಹೂ ರಭಸದ ವಾದವಿವಾದಮಾಡುವ ಲಕ್ಷಣವಿದೆ.

**ಶಾರದಾ—** ಯಾವ ವಿಷಯುದಲ್ಲಿ ?

**ಕುಮಾರ—** ಅದೇನೋ ನೀನೇ ಕೇಳಿಕೊ. ನಾನು ನೇಗಿಯ ಕೆಲಸಕ್ಕೆ ಹೋಗುವೆನು. (ಹೋಗುವ)

**ಶಾರದಾ—** (ಅವನನ್ನು ನೋಡುತ್ತ ಸಜಲ ನೇತ್ರೆಯಾಗಿ) ಪತಿಯು ನನ್ನನ್ನು ವಂಚಿಸದಿದ್ದರೆ, ಮಾತಾಪಿತೃಗಳು ನನ್ನನ್ನು ತಿರಸ್ಕರಿಸದಿದ್ದರೆ ಕಂದಾ ಹೀಗೆ ನೀನು ದೈವಗೇಡಿಯಾಗಿ ಪರದೇಶಿಯಾಗುತ್ತಿದ್ದೆಯಾ ? (ಚೇತರಿಸಿ) ಅಥವಾ ಇವ




ನಾಗಾಭಟ್ಟ.   ಹಿರಣ್ಯಗರ್ಭಾ.   ಕುಮಾರ.   ಮಹಾತ್ಮಾಜಿ.   ಶಾರದೆ.   ರಮಾಬಾಯಿ.

**ನಾಗಾಭಟ್ಟ:**— ನಿಃಸಂದೇಹವಾಗಿ ಒಪ್ಪಿಕೊಳ್ಳಬಹುದು.

[ಪುಟ ೨೭.

ನನ್ನು ದೈವಗೇಡಿಯಂತಲೂ ಪರದೇಶಿಯಂತಲೂ ಹೇಗನ್ನಲೀ! ಮೂರ್ತಿಮಂತ ಪ್ರೇಮಿಗಳೂ ಸತ್ಯಸಂಧರೂ ಮತ್ತೂ ವಿಶ್ವಬಂಧುಗಳಾದ ಅಪ್ಪಾಜಿಯವರಂಥ ಮಹಾತ್ಮರ ಸಾನಿಧ್ಯವನ್ನು ಪಡೆದಿದ್ದಾನೆ. ಇಂಥವನು ದೈವಗೇಡಿಯೋ! ದೇಶ ಸೇವೆಯೇ ಈಶಸೇವೆಯೆಂದು ಅಪ್ಪಾಜಿಯವರ ಕೃಪೆಯಿಂದ ನಂಬಿಕೊಂಡ ಸುದ್ಯೆವಿಯು ದೈವಗೇಡಿಯೇ! ಮನುಷ್ಯನನ್ನು ಪಿಶಾಚಿಯನ್ನಾಗಿ ಮಾಡುವ ಹನ್ನೆರಡು ಹಾಳು ವಿದ್ಯೆಗಳನ್ನು ಕಲಿಯದೇ ಮನುಷ್ಯನು ಕೊನೆಯವರೆಗೂ ಹೇಗೆ ಮನುಷ್ಯನಾಗಿ ಉಳಿಯಬೇಕೆನ್ನುವ ನಿಜವಾದ ವಿದ್ಯೆಯನ್ನು ಕಲಿಸುವ ಸದ್ಗುರುವಿನ ಶಿಷ್ಯನು ದೈವಗೇಡಿಯೇ! ಸರ್ವಥಾ ಅಲ್ಲ. ಅವನು ಮಹಾನ್ ಸುದ್ಯೆವಿಯು. ನಶ್ವರ ದೇಹವು ಮಣ್ಣುಪಾಲಾದರೂ ಸುಕೀರ್ತಿ ದೇಹಧಾರಿಯಾಗಿ ಆಚಂದ್ರಾರ್ಕ ಬಾಳುವ ಚಿರಂಜೀವಿಯು. ಇರಲಿ ಈ ಹದಿನೇಳು ವರ್ಷಗಳಲ್ಲಿ ನನ್ನ ತಂದೆ ತಾಯಿಗಳ ವಿಚಾರದಲ್ಲೇನಾದರೂ ವ್ಯತ್ಯಾಸವಾಗಿರುವದೋ ಇಲ್ಲವೋ ಕೇಳುವಾ. (ಹೋಗುವಳು).

---

# ೩ನೆಯ ಪ್ರವೇಶ

(ಗುಡಿಸಿಲಲ್ಲಿಯ ಮಹಾತ್ಮಾಜೀಯವರು ಕುಳಿತುಕೊಳ್ಳುವ ಸ್ಥಳ. ಮಹಾತ್ಮಾಜೀಯವರು ಚರಕೆಯಮೇಲೆ ನೂಲುತ್ತ ಬಂದವರೊಡನೆ ಸಂವಾದ)

**ಮಹಾತ್ಮಾಜೀ**— (ಮಂದಸ್ಮಿತ). ಅಂದಬಳಿಕ ನಮ್ಮ ಉದ್ಧಾರವಾಗಬೇಕಾದರೇ ಮೊದಲು ಅಸ್ಪೃಶ್ಯತಾನಿವಾರಣೆಯಾಗಲಿಕ್ಕೇಬೇಕೆಂದು ಹೇಳಿದ ನನ್ನ ವಿಚಾರಗಳು ತಮಗೆ ಮಾನ್ಯವಾದಂತಾಯಿತು.

**ಹಿರಣ್ಯ**—ಓಹೋ ಒಪ್ಪಿಕೊಳ್ಳಲಿಕ್ಕೇನು ಅಡ್ಡಿಯಿಲ್ಲ. ಏಕೆ ನಾಗಾಭಟ್ಟರೇ?

**ನಾಗಾ**— ನಿಸ್ಸಂದೇಹವಾಗಿ ಒಪ್ಪಿಕೊಳ್ಳಬೇಕು.

**ಮಹಾತ್ಮಾ**— ಇನ್ನು ಪುನರ್ವಿವಾಹಾದಿಗಳ ವಿಷಯ. ಪ್ರೌಢವಿವಾಹವು ಹಿತವಾದದ್ದೆಂದು ಮೊದಲಿಂದಲೂ ಅನುಭವವಿದೆ. ಸೀತಾ, ದ್ರೌಪದಿ, ದಮ

ಯಂತಿ, ಋಕ್ಮಿಣಿ ಮೊದಲಾದ ಪುರಾಣಕಾಲದ ಆದರ್ಶ ನಾರಿಯರು ಸಜ್ಞಾನಿಗಳಾದಮೇಲೆ ವಿವಾಹಿತರಾದರಲ್ಲವೇ ? ಹಾಗಿರಲು ಆ ವಿಷಯವಾಗಿ ವಾದವೇಕೆ ? ಇನ್ನು ಚಿಕ್ಕ ಹೆಣ್ಣುಮಕ್ಕಳನ್ನು ಹಣದಾಸೆಗಾಗಿ ಮುಪ್ಪಿನವರಿಗೆ ಕೊಡುವ ಘಾತುಕ ರೂಢಿಗಳು ಸಮಾಜದಲ್ಲಿ ರೂಢವಾಗಿರುವತನಕ ಪುನರ್ವಿವಾಹವನ್ನು ಸಮ್ಮತಿಸುವದು ಜಾಣತನವು. ಅಥವಾ ತರುಣರು ಅಕಾಲದಲ್ಲಿ ಸಾಯದಿದ್ದರೇ ಪುನರ್ವಿವಾಹದ ಪ್ರಶ್ನವೇ ಉಂಟಾಗುವದಿಲ್ಲವಲ್ಲಾ !

**ಹಿರಣ್ಯ**— ಅನಬಹುದು. ಅನಬಹುದು. ಏಕೆ ಸ್ವಾಮೀ ನಾಗಾಭಟ್ಟರೇ ?

**ನಾಗಾ**— ಅಂದರೂ ಅನ್ನಬಹುದು.

**ಮಹಾತ್ಮಾ**— ಪುನರ್ವಿವಾಹದ ರೂಢಿ ಇಲ್ಲದ ಸಮಾಜಗಳ ಯುವಕರು ತಮ್ಮ ಸುವಿಚಾರ ಸದಾಚಾರಗಳಿಂದ ನಿಸ್ಸಂದೇಹವಾಗಿ ದೀರ್ಘ ಜೀವಿಗಳಾಗಿರುತ್ತಿದ್ದರು. ಆಕಾಲದಲ್ಲಿ ಬಾಲವಿಧವೆಯರನ್ನು ಕಾಣುವದೇ ಅಪರೂಪವಾಗಿತ್ತು. ಪ್ಲೇಗು ಇನ್‌ಫ್ಲುಎಂಝಾ ಮೊದಲಾದ ಜಾಡ್ಯಗಳು ಕೊಚ್ಚಿಹಾಕುವ ಈಗಿನ ಮನ್ವಂತರದಲ್ಲಿ ಬಾಲವಿಧವೆಯರ ಸಂಖ್ಯೆಯು ಮಿತಿಮೀರಿದೆ. ಇಂತಹ ಕಾಲಕ್ಕನುಸರಿಸಿ ಪುನರ್ವಿವಾಹಕ್ಕೆ ಸಮ್ಮತಿಯನ್ನೀಡುವದೇನು ಅಸಮಂಜಸವಾಗಲಿಕ್ಕಿಲ್ಲ.

**ಹಿರಣ್ಯ**— ಛೀ ಉಂಟೇ ! ಏಕೆ ನಾಗಾಭಟ್ಟರೇ ?

**ನಾಗಾ**— ಓಹೋ ನಿಸ್ಸಂದೇಹಾ !

**ಮಹಾತ್ಮಾ**— ಬಾಲವಿಧವೆಯರೆಲ್ಲರೂ ಸೀತಿಪಂತೆರಾಗಿರುವರೆಂದು ಯಾರಾದರೂ ಸಿದ್ಧಾಂತವಾಗಿ ಹೇಳಬಲ್ಲಿರೋ ? ಶಕ್ಯವಿಲ್ಲ. ಸಾಮಾಜಿಕ ಧಾರ್ಮಿಕ ಬಹಿಷ್ಕಾರಗಳ ಭೀತಿಯಿಂದ ಪುನರ್ವಿವಾಹ ನಿಷೇಧವಿರುವ ಸಮಾಜಗಳಿಗೆ ಭ್ರೂಣ ಬಾಲಹತ್ಯಾದಿಗಳ ದೋಷವು ತಗಲದಿರುವದೇ ? ಅಂತಹ ಪಾಪ ವಿಶೇಷಗಳಿಂದುಳಿದುಕೊಳ್ಳುವದಕ್ಕಾದರೂ ಇಷ್ಟವಿದ್ದ ವಿಧವೆಯರಿಗೆ- ಅದೂ ಇಷ್ಟವಿದ್ದ ವಿಧವೆಯರಿಗೆ ಪುನರ್ವಿವಾಹ ಸಮ್ಮತಿಯನ್ನಿಡುವದು ಯುಕ್ತಿಯುಕ್ತವಾಗಲಿಕ್ಕಿಲ್ಲವೇ ?

ಇಬ್ಬರು— ಅಡ್ಡಿಯೇನು ಅಡ್ಡಿಯೇನು? (ಕುಮಾರ ಟಪಾಲ ತಂದುಕೊಡುವನು)

**ಮಹಾತ್ಮ—** (ಪತ್ರಗಳನ್ನು ನೋಡುತ್ತ) ಈ ದಿನ ಹೆಚ್ಚು ಪತ್ರಗಳಿಲ್ಲ. ಸ್ವಲ್ಪ ತಡಿಯುವಿರಾ ಪತ್ರಗಳನ್ನು ನೋಡುವೆನು. ಇದೊಂದೇ ಕರ್ನಾಟಕದ ಪತ್ರವು. (ನೋಡಿ) ಲಕ್ಷ್ಮಣಪುರವೆಂಬ ಗ್ರಾಮದ ಪದ್ಮನಾಭಾಚಾರ್ಯ ಹಿರಣ್ಯ ಗರ್ಭಾಚಾರ್ಯರೆಂಬ ದೇಶಭಕ್ತರು ಬರೆದುಕೊಂಡಿದ್ದಾರೆ.

**ನಾಗಾ—** ಏನು ಸ್ವಾಮೀ ಹಿರಣ್ಯಗರ್ಭಾಚಾರ್ಯರೇ ತಮ್ಮ ಚಿರಂಜೀವಿಗಳ ಪತ್ರವಾಗಿದೆ.

**ಮಹಾತ್ಮಾ—** ಏನೂ ಪದ್ಮನಾಭಾಚಾರ್ಯರು ತಮ್ಮ ಚಿರಂಜೀವರೇ ಮತ್ತೂ (ಲಕ್ಷ್ಮಣಪುರವು) ತಮ್ಮ ಗ್ರಾಮವೋ ?

ಇಬ್ಬರು— ಅಹುದು ಮಹಾತ್ಮರೇ.

**ಮಹಾತ್ಮಾ—** ಅಯ್ಯೋ ಇದೇನು ಸ್ವಾಮೀ ನನಗೆ ಮಹಾತ್ಮನೆಂದು ಹೇಳುವಿರಿ ? ನಾನೊಬ್ಬ ಬಡವರ ಅಡಿಯಾಳಾಗಿದ್ದೇನೆ.

**ಹಿರಣ್ಯ—** ತಪ್ಪೇನು ಮಹಾನುಭಾವಾ ? ಲೋಕವೆಲ್ಲವೂ ತಮಗೆ ಮಹಾತ್ಮಾಜೀಯೆಂದು ಹೇಳುವಾಗ್ಗೆ ನಾವು ಹಾಗೆ ಹೇಳದಿರುವದು ಶಾತ್ಯತನವಾಗಲಿಕ್ಕಿಲ್ಲವೇ ? ಅಸ್ತು. ನಮ್ಮ ಚಿರಂಜೀವರೇನು ಬರೆದುಕೊಂಡಿದ್ದಾರೆ ?

**ಮಹಾತ್ಮಾ—** ಒಬ್ಬರ ಪತ್ರವನ್ನು ಮತ್ತೊಬ್ಬರಿಗೆ ಓದಿಹೇಳುವದು ಸಿಷ್ಟಾಚಾರವಲ್ಲ.

**ಹಿರಣ್ಯ—** ಅದು ನಿಜ. ಆದರೇ ಅದು ನಮ್ಮ ಚಿರಂಜೀವರ ಪತ್ರವಿದ್ದದ್ದಕ್ಕೆ ಕೇಳಿದೆನು ಕ್ಷಮಿಸಿ.

**ಮಹಾತ್ಮಾ—** ಮೊದಲು ಹೇಳಿ ? ತಮ್ಮ ಚಿರಂಜೀವರು ಊರಲ್ಲೇನು ಮಾಡುತ್ತಿರುವರು ?

**ಹಿರಣ್ಯ—** ಮೊದಲು ವರ್ಕಷಾಪಿನಲ್ಲಿ ನೌಕರನಾಗಿದ್ದನು. ತಮ್ಮ ಬಡ ಜನ ಸಂರಕ್ಷಕ ಅಂದೋಲನವು ಪ್ರಾರಂಭವಾಗುತ್ತಲೇ ಆ ನೌಕರಿಯನ್ನು ಬಿಟ್ಟು

ನೂಲುವ ಮತ್ತೂ ನೇಯುವ ವ್ಯವಸಾಯವನ್ನು ತಾನು ಕೈಕೊಳ್ಳುವದಲ್ಲದೇ ತನ್ನಂತೆ ಅನೇಕ ಜನರನ್ನು ಮಾಡಿಕೊಂಡನು. ಈಚೀಚಿಗೆ ಊರುಬಿಟ್ಟು ನಮಗೆ ನಾಲ್ಕೈದು ತಿಂಗಳುಗಳಾದವು. ಅವನ ಕಾರ್ಯಕಲಾಪಗಳ ವಿಷಯ ಗೊತ್ತಾಗಿಲ್ಲ.

**ಮಹಾತ್ಮ—** ಇನ್ನೇನು ಈ ಪತ್ರದ ಸಮಾಚಾರವನ್ನು ತಿಳುಹಿಸಲು ಹರವಿಲ್ಲ. ಕೇಳಿ ಅವರು ಹೀಗೆ ಬರೆಯುತ್ತಾರೆ "ನಾವು ನಮ್ಮ ಗ್ರಾಮದಲ್ಲಿ ಚರಖಾಲಯವನ್ನು ಪ್ರಾರಂಭಿಸಿದ್ದೇವೆ. ಇಲ್ಲಿ ನೂಲುವ ಮತ್ತೂ ನೇಯುವ ಕೆಲಸಗಳು ಬಹು ರಭಸವಾಗಿ ನಡದಿವೆ. ಇಲ್ಲಿಯ ಮಹಾರೋಗಪೀಡಿತರಾದ ಜಹಗೀರದಾರ ಮಾಧವರಾಯರೆನ್ನುವವರು ಈ ಬಡ ಜನರ ಶೇವಾಕಾರ್ಯಾ ಲಯಕ್ಕಾಗಿ ತಮ್ಮ ಅರಮನೆಯನ್ನೇ ದಾನಮಾಡಿದ್ದಾರೆ.

**ನಾಗಾ—** ನೋಡಿದಿರಾ ಹಿರಣ್ಯಗರ್ಭಾಚಾರ್ಯರೇ ನಾವು ಹೊರಡುವಾಗ್ಗೆ ಜಹಗೀರದಾರ ಮಾಧವರಾಯರ ವಿಷಯವಾಗಿ ಕಟ್ಟಿದ ಮಹಾರೋಗತರ್ಕವು ನಿಜವಾಗಿದೆ.

**ಮಹಾತ್ಮ—** ಇನ್ನು ಮೇಲೆ ತೀವ್ರವೇ ಅವರ ಮಹಾರೋಗ ನಿವಾರಣೆಯಾಗಬಹುದು.

ಇಬ್ಬರು— ಅದು ಹೇಗೆ ಮಹಾನುಭಾವರೇ ?

**ಮಹಾತ್ಮಾ—** ಮಹಾರೋಗಕ್ಕೆ ರಾಮಬಾಣ ಔಷಧವೆಂದರೇ ತ್ಯಾಗಾ. "ಈಗ್ಗೆ ನಾವು ದೊಡ್ಡ ಪ್ರಮಾಣದಿಂದ ಬಗೆ ಬಗೆಯಾದ ಸುಂದರ ಖಾದೀ ತಯಾರಿಸುವ ವಿಚಾರದಲ್ಲಿದ್ದೇವೆ ಪ್ರಯುಕ್ತ ತಮ್ಮ ಆಶ್ರಮದೊಳಗಿನ ನುರಿತ ಉತ್ಸಾಹಿ ತಜ್ಞರನ್ನು ಕೆಲ ದಿನ ಮಟ್ಟಿಗಾದರೂ ನಮ್ಮ ಸಹಾಯಕ್ಕಾಗಿ ಕಳುಹಿಸಬೇಕೆಂದು ಪ್ರಾರ್ಥಿಸಿಕೊಳ್ಳುವ ಪ॥ ಹಿ॥ ಅಗ್ನಿಹೋತ್ರಿ (ಲಕ್ಷ್ಮಣಪುರ)"

**ಹಿರಣ್ಯ—** ನಮ್ಮ ಪದ್ಮಾಯೇನು ಸಾಮಾನ್ಯ ಹುಡುಗನೇ? ಹೇಗೆ ಗಲಾಟೆಹೂಡಿಬಿಟ್ಟಿದ್ದಾನೆ.

**ಮಹಾತ್ಮಾ—** ತಮ್ಮ ಪದ್ಮಾಯಾರು? ಮತ್ತೊಬ್ಬ ಚಿರಂಜೀವನೇನು?

**ನಾಗಾ—** ಅಲ್ಲಲ್ಲ ತಮ್ಮ ಮಗನಾದ ಪದ್ಮನಾಭಾಚಾರ್ಯರಿಗೇನೇ ಪ್ರೀತಿಯಿಂದ ಪದ್ಯಾ ಪದ್ಯಾ ಎಂದು ಹೇಳುವರು.

**ಮಹಾತ್ಮಾ—** ಪ್ರೀತಿಯು ಜನಗಳ ಹೆಸರನ್ನು ಇಷ್ಟು ಕೆಡಿಸಿ ನುಡಿದ ಬಳಿಕ ವೈರಿಗಳ ಹೆಸರುಗಳನ್ನು ಹೇಗೆ ಹೇಳುವಿರೀ?

**ಹಿರಣ್ಯ—** ಅದೊಂದು ದೇಶಾಚಾರ ಅಸ್ತು. ಮಹಾಸ್ವಾಮೀ ಇಲ್ಲಿಂದ ಉತ್ತಮರಾದ ತಜ್ಞರನ್ನು ಚಿರಂಜೀವನ ಸಹಾಯಕ್ಕಾಗಿ ಕಳುಹಿಸುವಿರಲ್ಲವೇ?

**ಮಹಾತ್ಮಾ—** ಕಳುಹಿಸಲಿಕ್ಕೇಬೇಕು. ಕರ್ನಾಟಕವು ಉತ್ಸಾಹದಿಂದ ಮಾಡುವ ಭಾರತಮಾತೆಯ ಸೇವೆಗಾಗಿ ನಾನು ತುಂಬಾ ಅಭಿಮಾನಪಡುತ್ತೇನೆ. ಇರಲಿ ಇನ್ನು ತಮ್ಮ ಪ್ರವಾಸವಾವಕಡೆಗೆ?

**ನಾಗಾ—** ಕಾಶೀ, ಗಯಾ, ಪ್ರಯಾಗಾದಿ ಯಾತ್ರೆಗಾಗಿ ಹೊರಟಿದ್ದೆವು, ಆ ಕಾರ್ಯಗಳೆಲ್ಲವೂ ತೀರಿದವು. ಇನ್ನು ನೆಟ್ಟಗೆ ಊರಿಗೆ ಹೋಗಿಬಿಡುವೆವು.

**ರಮಾ—** ಹೋಗಹೋಗುತ್ತ ಮುಮಾಯಿ, ಪುಣ್ಯ, ಪಂಡ್ರಾಪುರಾ ನೋಡಿಕೊಂಡು ಹೋಗುವ ವಿಚಾರವಿತ್ತಲ್ಲಾ?

**ಮಹಾತ್ಮಾ—** ಹಾಗಾದರೇ ತಾವು ನಿಧಾನವಾಗಿ ಹೋಗಿರಿ ಇಲ್ಲಿಂದ ಕಳುಹಿಸುವವರನ್ನು ಪರಭಾರೆಯಾಗಿ ರವಾನಿಸುವೆನು ತಮ್ಮ ಗೂಡ ಬೇಡ.

**ಹಿರಣ್ಯ—** ಒಳ್ಳೇ ಜನಗಳನ್ನು ಕಳುಹಿಸಬೇಕು ಮಹಾಸ್ವಾಮೀ.

**ಮಹಾತ್ಮ—** ಇದೋ ಈ ತಾಯಿಮಕ್ಕಳ ಜೊತೆಯನ್ನು ಕಳುಹಿಸುವೆನು ಇವರು ಬ್ರಾಹ್ಮಣರು. ಈ ಮಾತಾ ನೂಲುವದರಲ್ಲಿಯೂ ಈಕೆಯ ಮಗನು-ನಿಮ್ಮನ್ನು ಮೊದಲು ಇಲ್ಲಿಗೆ ಕರೆತಂದ ಸ್ವಯಂಸೇವಕನು- ನೇಯುವದರಲ್ಲಿ ಬಹು ಕುಶಲನು. ಈರ್ವರು ಬಹು ಒಳ್ಳೆಯವರು. ನನ್ನ ಪರಮಪ್ರೀತಿ ವಿಶ್ವಾಸದವರು ಅದಕ್ಕಾಗಿ ಇವರನ್ನೇ ಕಳುಹಿಸುವೆನು.

**ಇಬ್ಬರು—** ಅಸ್ತು. (ಏಳುತ್ತ) ನಮಗೆ ಅಪ್ಪಣೆಯಾಗಲಿ.

**ಮಹಾತ್ಮ**— ಆಶ್ರಮಕ್ಕೆ ಬಂದವರನ್ನು ಹಾಗೆಯೇ ಕಳುಹಿಸುವ ಸಾಂಪ್ರದಾಯವಿಲ್ಲಾ. ತಮ್ಮಗಳ ಭೋಜನವಾಗಬೇಕು, ಬೇಕಾದರೇ ನಮ್ಮಲ್ಲಿಯೇ ಊಟಮಾಡಬಹುದು. (ಒಬ್ಬರನ್ನೊಬ್ಬರು ಕಕ್ಕವಿಕ್ಕಿಯಾಗಿ ನೋಡುವರು) ಇಲ್ಲವಾದರೇ ಶಿಧಾಸಾಮುಗ್ರಿಗಳನ್ನು ತಕ್ಕೊಂಡು ನದೀತಟಾಕದಲ್ಲಿ ಮಂಟಪವಿದೆಯಲ್ಲವೇ ಅಲ್ಲಿ ಅಡಿಗೆಯನ್ನು ಮಾಡಿ ಭೋಜನವನ್ನು ತೀರಿಸಿಕೊಂಡು ಆ ಮೇಲೆ ಪಯಣಬೆಳಿಸಬಹುದು. ಮಾತಾ ಅತಿಥಿಗಳನ್ನು ಸತ್ಕರಿಸು.

**ಶಾರದಾ**— ಆಗಬಹುದು, ಮಹಾಶಯರೇ ನನ್ನಗೂಡ ಬರುವಿರಾ? ಕುಮಾರ ಎಲೋ ಕುಮಾರಾ! (ಬರುವನು) ಇವರ ಸಾಮಾನುಗಳನ್ನು ತೆಗಿದುಕೋ ಮತ್ತೂ ಮಂಟಪಕ್ಕೆ ಕರೆದುಕೊಂಡುನಡೆ. ನಾನು ನಿಮ್ಮ ಹಿಂದೆಯೇ ಬರುವೆನು (ಮಹಾತ್ಮಾಜಿಯವರವಿನಃ ಸಕಲರೂ ಹೋಗುವರು. ಮಹಾತ್ಮಾಜಿ ಮುಂದೆ ಬಂದು)

**ಮಹಾತ್ಮಾ**— ಸಮಾಜೋನ್ನತಿಗೆ ವಿಘಾತಕವಾದ ಎಷ್ಟು ಬಗೆಯ ರೂಢಿಗಳು ನಮ್ಮಲ್ಲಿ ಬೇರೂರಿಕೊಂಡಿವೆ. ಅಸ್ಪೃಶ್ಯತಾನಿವಾರಣೆಯನ್ನು ಮಾಡಬೇಕೆಂದು ಎಷ್ಟು ಬಗೆಯಾಗಿ ಯತ್ನಿಸುತ್ತಿರುವೆನು. ಸಮಾಜದೊಳಗಿನ ಕೆಲ ಜನ ಹಟವಾದಿಗಳ ಹಟದಿಂದ ಅದಕ್ಕೆ ಇನ್ನೂ ಸಾಕಷ್ಟು ಯಶವು ಬರಲೊಲ್ಲದು. ಪತಿತಪರಾವರ್ತನೆಗಾಗಿ ಕೆಲ ಜನ ಧರ್ಮಬಂಧುಗಳು ಬಹು ರಭಸವಾಗಿ ಯತ್ನಿಸುತ್ತಲಿದ್ದಾರೆ. ಆದರೆ ಅದಕ್ಕೂ ವಿಘ್ನಗಳೆ. ಇನ್ನು ಪುನರ್ವಿವಾಹ ವಿಷಯವನ್ನು ತೆಗೆದರಂತೂ ವೈದಿಕರ ಮಸ್ತಕವೇ ಕೆಟ್ಟು ಹೋಗುವದು. ಬಾಲವಿವಾಹ ವೃದ್ಧ ತರುಣೀ ವಿವಾಹಗಳ ಪ್ರಮಾದದಿಂದ ಸಮಾಜವಲ್ಲಿ ಬಾಲವಿಧವೆಯರ ಸಂಖ್ಯೆಯನ್ನು ಬೆಳೆಯಗೊಟ್ಟ ದೋಷವು ಪುನರ್ವಿವಾಹದಿಂದ ದೂರಾಗಲಿಕ್ಕಿಲ್ಲವೇ? ಪರದೇಶಗಳಿಗೆ .ಹೋಗಿಬಂದವರಿಗೆ ಬಹಿಷ್ಕಾರಹಾಕುವ ಮಹಾಪಂಡಿತ ಮಹಾಶಯರು ಇನ್ನೂ ಕೆಲವರು ನಮ್ಮ ಧರ್ಮಪೀಠಗಳಲ್ಲಿ ವಿರಾಜಮಾನರಾಗಿದ್ದಾರೆ. ಕಾಲಕ್ಕೆ ಸರಿಯಾಗಿ ಆಚಾರಗಳು ಬದಲಾವಣೆಯಾಗೇ ಆಗುವವು. ಆ ಜಗಚ್ಚಾಲಕನಿಗೆ– ಆ ಸತ್ಯಸ್ವರೂಪನಿಗೆ

ತನ್ನ ಸಂತಾನದ ಚಿಂತೆಯೂ ಇದ್ದೇ ಇದೆ. ಎಷ್ಟು ಬಗೆಯ ತಡೆಗಳುಂಟಾದರೂ ಆತನ ಸಂಕಲ್ಪವೇ ಗೆದಿಯುವದು. ಅಲ್ಲಿಯತನಕ ಧರ್ಮದ ಹೆಸರಿನಿಂದ ರೂಢಿಯಲ್ಲಿರುವ ಈಗಿನ ಕಾಲಕ್ಕೆ ಸಲ್ಲದ ಕೆಲ ರೂಢಿಗಳ ಮೂಲಕವಾಗಿ ಸಮಾಜವು ನಮ್ಮ ಶಾರದಾಮಾತೆಯಂಥ ಆದರ್ಶ ನಾರೀರತ್ನಗಳ ಮತ್ತು ಕುಮಾರನಂಥ ಸುಸ್ವಭಾವೀ ತರುಣರ ಸೇವೆಗೆ ಎರವಾಗಬೇಕಾಗಿದೆ.

**ಕುಮಾರ**— (ಪ್ರವೇಶಿಸಿ) ಅಪ್ಪಾಜೀ, ನಮ್ಮನ್ನು ತಾವು ಸನ್ನಿಧಿಯಿಂದ ದೂರ ಮಾಡುವಾಲೋಚನೆಯನ್ನು ಮಾಡಿರುವಿರಂತೆ. ಅಹುದೇನು ?

**ಮಹಾತ್ಮಾ**— ಅಹುದು. ಕುಮಾರ, ಕರ್ನಾಟಕದಲ್ಲೊಂದು ಖಾದೀ ಕೇಂದ್ರವು ಸ್ಥಾಪನವಾಗಿದೆ. ನೀನು ಮತ್ತು ಮಾತಾಜೀ ಈರ್ವರೂ ಅದರ ಸಹಾಯಕ್ಕಾಗಿ ಹೋಗಬೇಕು.

**ಕುಮಾರ**— ಬೇರೆಯವರನ್ನು ಕಳುಹಿಸಬಹುದಾಗಿತ್ತು.

**ಮಹಾತ್ಮಾ**— ದಿವ್ಯತರವಾದ ಖಾದಿಗಳನ್ನು ತಯಾರಿಸುವ ಕೌಶಲ್ಯವನ್ನು ಉಳಿದವರು ಅಷ್ಟು ಪಡೆದಿಲ್ಲವಲ್ಲಾ !

**ಕುಮಾರ**— ತಾಯಿಮಕ್ಕಳಾದ ನಾವು ನೂಲುವ ಮತ್ತೂ ನೇಯುವ ಕೆಲಸದಲ್ಲಿ ಪ್ರಾವೀಣ್ಯವನ್ನು ಸಂಪಾದಿಸಿದ ತಪ್ಪಿಗಾಗಿ ನಮಗೀ ಶಿಕ್ಷೆಯೋ ?

**ಮಹಾತ್ಮಾ**— ಈ ಶಿಕ್ಷೆಯನ್ನು ಬಹು ಜನರು ಪಡೆಯಲೆಂದು ನಾನು ಹಾರೈಸುವೆನು.

**ಕುಮಾರ**— ಅಪ್ಪಾಜೀ, ತಮ್ಮ ವಿಯೋಗವು ನಮಗೆ ಸಹನವಾಗಲಿಕ್ಕಿಲ್ಲ.

**ಮಹಾತ್ಮಾ**— ಲೋಕಸೇವಾ ದೀಕ್ಷೆಯನ್ನು ಹೊಂದಿದವರು ಇಂತಹ ಮೋಹವನ್ನು ಬಿಡಲೇಬೇಕು.

**ಕುಮಾರ**— ಅದು ತಮ್ಮಂಥ ತಿಳಿದವರಿಂದಾಗಬಹುದು.

**ಮಹಾತ್ಮಾ**— ತಿಳಿಗೇಡಿಗಳಾದ ನಿಮಗೆ ನಿರ್ಮೋಹವೃತ್ತಿಯನ್ನು ಕಲಿಸುವ ಬೇರೆ ಉಪಾಯವೇನಿದೆ ? ಆಗಾಗ್ಗೆ ದೂರದಲ್ಲಿರಿಸುವದೊಂದೇ ಯೋಗ್ಯ



೩—೩೧೪೭

ಮಾಡುಪಾಯವಲ್ಲವೇ ? ಕುಮಾರ, ನೀನು ನನ್ನಲ್ಲಿರಿಸಿದ ಪ್ರೇಮವನ್ನು ಸಕಲರಲ್ಲಿಯೂ ಇರಿಸುವ ರೂಢಿಯನ್ನು ಅವಶ್ಯವಾಗಿ ಮಾಡುತ್ತಹೋಗು. ಅಂದರೆ ಆವ ಕಾಲಕ್ಕೂ ನಿನಗೆ ನನ್ನ ವಿಯೋಗದುಃಖವಾಗದು. ನನ್ನ ಈ ಜಡದೇಹವನ್ನು ಪ್ರೀತಿಸುವದು ಸಾಮಾನ್ಯವಾದ ಪ್ರೇಮವು. ನನ್ನ ತತ್ವವನ್ನು ಪ್ರೀತಿಸುವದೇ ಅಸಾಮಾನ್ಯ ಪ್ರೇಮದ ಲಕ್ಷಣವು. ಶಾರದಾಮಾತೆಯು ಅಂತಹ ಅಸಾಮಾನ್ಯ ಪ್ರೇಮಮಯಿಯಾಗಿದ್ದಾಳೆ. ಆಕೆಯು ನಿನ್ನ ಹತ್ತಿರವಿರುವದರಿಂದ ನಿನ್ನ ಮನಕ್ಕೆ ಸಮಾಧಾನವೇ ಇರುವದು. ಚಿಂತಿಸಬೇಡ. ಅಲ್ಲದೆ ನಾನಾದರೂ ಅಗತ್ಯವಿದ್ದಾಗ್ಗೆ ನಿಮ್ಮನ್ನು ಅವಶ್ಯವಾಗಿ ಕಾಣುವೆನು. (ತೆರೆ—ಫಲಾಹಾರಕ್ಕೆ ಬರ್ರೀಣವಾಗಲಿ) ನಡೆ ಕುಮಾರ ಫಲಾಹಾರವನ್ನು ತೀರಿಸಿಕೊಳ್ಳುವಾ. (ಹೋಗುವರು)

---

## ೪ನೆಯ ಪ್ರವೇಶ

ನದೀತಟಾಕ ಮಂಟಪ:— (ಸ್ನಾನಾದಿಗಳನ್ನು ತೀರಿಸಿಕೊಂಡ ರಮಾಬಾಯಿಯು ಅಡುಗೆಯ ವಿಚಾರದಲ್ಲಿಯೂ ಹಿರಣ್ಯಗರ್ಭಾಚಾರ್ಯರು ಅನುಷ್ಠಾನಸಿದ್ಧತೆಯಿಂದ ಕುಳಿತಂತೆ)

ರಮಾ— ನೋಡಿ, ಆ ಮಾತಾಬಾಯಿಯು ತದ್ರೂಪ ನಮ್ಮ ಶಾರದೆಯಂತಿಲ್ಲವೇ ? (ವಾತ್ಸಲ್ಯಸ್ವರ)

ಹಿರಣ್ಯ— ಅಹುದು ನೋಡೆ, ಏನೂ ವ್ಯತ್ಯಾಸವಿಲ್ಲಾ ! ಇದೆಂಥ ಬ್ರಹ್ಮಸೃಷ್ಟಿಯ ಚಾತುರ್ಯ !

ರಮಾ— ನಾನೂ ಬಹು ಪರೀಕ್ಷಿಸಿ ನೋಡಿದೆನು. ಹೋಲಿಕೆಯಲ್ಲಿ ಎಳ್ಳಷ್ಟಾದರೂ ಹೆಚ್ಚುಕಡಿಮೆಯಿಲ್ಲ. ಸ್ವರವು ನೋಡಿ, ಸ್ವಲ್ಪಾದರೂ ವ್ಯತ್ಯಾಸವೇ ?

ಹಿರಣ್ಯ— ಅಗಾಧವಾದ ಸಾಮ್ಯವು ! (ಶಾರದಾ ಬರುವಳು).

ಶಾರದಾ— ತಮಗೆ ಮತ್ತೇನೇನು ಬೇಕು ?

**ರಮಾ**— ಜೊತೆಯಲ್ಲಿ ಎಲ್ಲ ಸಾಮುಗ್ರಿಗಳನ್ನು ಹಾಕಿದ್ದೇವೆ, ತಾಯೀ. ನಮಗೇನೂ ಬೇಡ.

**ಶಾರದಾ**— ತಮ್ಮ ಸಾಮುಗ್ರಿಗಳನ್ನು ಹೊರಗೆ ತೆಗೆಯಬೇಡಿರಿ. ನಾವು ಸಮರ್ಪಿಸುವ ಸೇವೆಯನ್ನೇ ಕೈಕೊಳ್ಳಬೇಕು. ಹಾಗೆ ಅಪ್ಪಾಜಿಯವರ ನಿರ್ಬಂಧವಿದೆ.

**ಹಿರಣ್ಯ**— ಆಗಲಿ ಮಾತಾಬಾಯಿಯವರೇ. ಏನೇ, ಅವರ ಹೇಳಿಕೆಯಂತೆ ಮಾಡು.

**ಶಾರದಾ** — ನನ್ನ ಹೆಸರು ಮಾತಾಬಾಯಿಯಲ್ಲ. ತಮ್ಮ ದೇಶದಲ್ಲಿ ಅಮ್ಮಾ ಅಪ್ಪಾ ಅಕ್ಕಾ ತಂಗೀ ಎಂದು ಸಾಮಾನ್ಯವಾಗಿ ಹೆಣ್ಣು ಮಕ್ಕಳನ್ನು ಕರೆಯುವಂತೆ ಈ ಔತ್ತರೇಯರು ಮಾತಾ, ಬೇನ್ ಮೊದಲಾದ ಶಬ್ದಗಳಿಂದ ಕರೆಯುವರು. ನನ್ನ ಹೆಸರು ಶಾರದಾ.

ಇಬ್ಬರೂ— (ಆಶ್ಚರ್ಯದಿಂದ) ಅಂ ! ಶಾರದಾ ?

**ಶಾರದಾ**— ಅಹುದು ಶಾರದಾ. ಏನು ಬಹು ಆಶ್ಚರ್ಯಚಕಿತರಾದಿರಿ ?

ಇಬ್ಬರೂ— ತಾಯೀ, ಅಂತಹ ಕಾರಣವೇ ಇದೆ.

**ಶಾರದಾ**— ಅದೇನು ? ತಿಳುಹಿಸಬಹುದೋ ?

**ರಮಾ**— ಇದೊ ತಂಗೀ, ನಮಗೆ ತದ್ರೂಪ ನಿನ್ನಂಥವಳೇ ಒಬ್ಬ ಮಗಳಿದ್ದಳು. ಈಗ್ಗೆ ಹದಿನೇಳು ವರ್ಷಗಳಾಚೆಗೆ ಬಟ್ಟೆಗಳನ್ನೊಗೆಯಲಿಕ್ಕೆಂದು ನದಿಗೆ ಹೋದವಳು ತಿರಿಗಿ ಬರಲೇ ಇಲ್ಲ. ಕಾಲುಜಾರಿ ಮುಳುಗಿ ಸತ್ತಳೋ ಅಥವಾ ಮೊಸಳೆಯು ಎಳೆದೊಯ್ಯಿತೋ ಯಾವದೂ ಗೊತ್ತಾಗಲಿಲ್ಲ.

**ಹಿರಣ್ಯ** — ಅದಕ್ಕಿಂತಲೂ ಆಶ್ಚರ್ಯವೆಂದರೆ ಅವಳ ತಮ್ಮ ಹೋಲಿಕೆಯು ಹೇಗೆ ಒಂದಾಗಿರುವದೋ ಹಾಗೆ ಹೆಸರು ಸಹಾ ಒಂದೇ !

**ಶಾರದಾ**— ಏನೂ ! ತಮ್ಮ ಮಗಳು ಹೆಸರು ಸಹ ಶಾರದಾಬಾಯಿ ಎಂದಿತ್ತೇ !

**ರಮಾ**— ಅಹುದಮ್ಮಾ ! ವಿಶೇಷವೇನು ! ಅವಳ ಎಡಗಣ್ಣಿನ ಹತ್ತರ ಮಚ್ಚೆ ವಿದ್ದಂತೆ ನಿನ್ನ ಎಡಗಣ್ಣಿನ ಹತ್ತರದಲ್ಲಿಯೂ ಇದೆ.

**ಶಾರದಾ—** ಆಶ್ಚರ್ಯಕರವಾದ ಸಾಮ್ಯವು! ಹಾಗಾದರೆ ನನ್ನನು ನೋಡುತ್ತಲೆ ತಮಗೆ ಆ ಗತಿಸಿಹೋದ ಮಗಳ ನೆನಪಾಗುತ್ತಿರಬಹುದು?

**ರಮಾ—** ಅಹುದು, ತಾಯೀ! ನಡೆನುಡಿ ರೂಪಾ ಎಲ್ಲ ಒಂದೆಯಾಗಿವೆ. (ಕಿಂಚಿತ ಅಳುತ್ತ) ನನಗೆ ಹೆಣ್ಣು ಮಗಳೆಂದರೇ ಅವಳೊಬ್ಬಳೇ ಇದ್ದಳು. ಚಿಕ್ಕ ವಯಸ್ಸಿನಲ್ಲಿಯೇ ಪತಿಯನ್ನು ಕಳಕೊಂಡಿದ್ದಳು.

**ಶಾರದಾ—** ಅಯ್ಯೋ! ಪಾಪ! ಆ ಮೇಲೆ ನೀವವಳಿಗೆ ಪುನರ್ವಿವಾಹ ಮಾಡಲಿಲ್ಲವೇ?

**ಹಿರಣ್ಯ—** ನಮ್ಮದೇಶದ ಬ್ರಾಹ್ಮಣರಲ್ಲಿ ಆ ಸಾಂಪ್ರದಾಯವಿಲ್ಲ, ತಾಯೀ!

**ಶಾರದಾ—** ಹಾಗಿದ್ದರೆ ಅವಳಾ ವೈಧವ್ಯಕ್ಕಾಗಿ ಆತ್ಮಹತ್ತ್ಯೆಯನ್ನು ಮಾಡಿಕೊಂಡಿರಬಹುದು. ಇರಲಿ. ಅಮ್ಮಾ ತಮ್ಮ ಹೆಸರೇನೆಂದು ಹೇಳಿದಿರಿ? (ರಮಾಬಾಯಿ) ರಮಾಬಾಯಿಯವರೇ, ಹೇಗೂ ತಮ್ಮ ಚಿರಂಜೀವರು ಪ್ರಾರಂಭಿಸಿದ ಚರಖಾಲಯದ ಸಹಾಯಕ್ಕಾಗಿ ತಾಯಿಮಕ್ಕಳಾದ ನಾವು ತಮ್ಮ ಗ್ರಾಮಕ್ಕೆ ಬರುವೆವಷ್ಟೇ!

**ರಮಾ—** ಬಂದಬಳಿಕ ನೀವು ನಮ್ಮ ಮನೆಯಲ್ಲಿಯೇ ಇದ್ದು ಬಿಡಿ. ನಾವು ನಿಮ್ಮನ್ನು ಬೇರೆ ಸ್ಥಳದಲ್ಲಿಳಿಯಗೊಡುವದಿಲ್ಲ.

**ಶಾರದಾ—** ಹಾಗಾದರೆ ನನ್ನನ್ನು ತಮ್ಮ ಮಗಳಾದ ಶಾರದಾಬಾಯಿಯಂತೆಯೂ ನನ್ನ ಮಗನನ್ನು ತಮ್ಮ ಮೊಮ್ಮಗನಂತೆಯೂ ಭಾವಿಸುವಿರಾ?

**ಹಿರಣ್ಯ—** ತಾವು ಬಂದು ಅಲ್ಲಿ ನಿಂತಬಳಿಕ ಆ ಸಮಾಚಾರಗಳು ಗೊತ್ತಾದಾವು! ಬೇಗ ತಾವು ನಮ್ಮ ಗ್ರಾಮಕ್ಕೆ ಬನ್ನಿ.

**ಶಾರದಾ—** ಬಹುಶಃ ಇಂದು ನಾಳೆ ಇಷ್ಟರಲ್ಲಿಯೇ ಅಪ್ಪಾಜಿಯವರು ನಮ್ಮನ್ನು ತಮ್ಮ ಗ್ರಾಮಕ್ಕೆ ಕಳುಹಿಸಬಹುದು. ಅದಾಯಿತು! ತಮ್ಮ ಸಂಗಡ ಬಂದ ಆ ಮತ್ತೊಬ್ಬ ಮಹಾಶಯರೆಲ್ಲಿ?

**ಹಿರಣ್ಯ—** ಅವರು, ಅದೋ, ಅಲ್ಲಿ ಅಡಿಗೆಯನ್ನು ಮಾಡಿದ್ದಾರೆ. ನಮ್ಮಲ್ಲಿ ಅವರು ಊಟಮಾಡುವದಿಲ್ಲ.

**ಶಾರದಾ—** ಅವರು ಬ್ರಾಹ್ಮಣರಲ್ಲವೇ?

**ಹಿರಣ್ಯ—** ಅಹುದು. ಅವರು ಸ್ಮಾರ್ತ ಬ್ರಾಹ್ಮಣರು, ನಾವು ವೈಷ್ಣವರು. ನಮ್ಮ ಅವರಲ್ಲಿ ಊಟ ಉಪಚಾರಗಳಾಗುವದಿಲ್ಲ. ಹೆಣ್ಣುಗಂಡುಗಳು ಮಾತ್ರ ನಡೆಯುವವು. ಅವರ ಮಗಳೇ ನನ್ನ ಮಗನ ಹೆಂಡತಿಯು.

**ಶಾರದಾ—** ಕಾಂಗ್ರೆಸ್ಸಿಗೆ ಬಂದಾಗ್ಗೆ ಕರ್ನಾಟಕ ದೇಶಿಯರೆಲ್ಲರೂ ಒಂದೇ ಪಙ್ಕ್ತಿಯಲ್ಲಿ ಕುಳಿತು ಭೋಜನಮಾಡುವರಲ್ಲಾ! ಮನೆಗೆ ಬಂದ ಬಳಿಕ ನೀವವ ರನು, ಪ್ರಾಯಶ್ಚಿತ್ತಾದಿಗಳಿಂದ ಶುದ್ಧಮಾಡಿಕೊಳ್ಳುತ್ತಿರಬಹುದು? ತಮ್ಮ ಪದ್ಮ ನಾಭಾಚಾರ್ಯರು ಕಾಂಗ್ರೆಸ್ಸಿಗೆ ಹೋಗುತ್ತಿರುವರೇನು?

**ರಮಾ—** ಅವನು ಪ್ರತಿವರ್ಷ ನೂರಾರು ರೂಪಾಯಿಗಳನ್ನು ವೆಚ್ಚಮಾಡಿ ಕೊಂಡು ಹೋಗುತ್ತಾನೆ.

**ಶಾರದಾ—** ಹಾಗೆ ಹೋಗಿ ಅಲ್ಲಿ ಎಲ್ಲರೊಡನೆ ಬೆರೆತು ಊಟ ಉಪ ಚಾರಗಳನ್ನು ಮಾಡಿದಂಥ ನಿಮ್ಮ ಮಗನನ್ನು ನೀವು ಪಙ್ಕ್ತಿಯಲ್ಲಿ ಕೊಳ್ಳುತ್ತಿರ ಲಿಕ್ಕಿಲ್ಲ?

**ರಮಾ—** ಅಮ್ಮಾ, ಶಾರದಾಬಾಯೀ ಕಾಣದ ಕಣ್ಣು. ನಾವೆಲ್ಲಾ ಅದನ್ನೆಲ್ಲಿ ನೋಡಿದ್ದೇವೆ?

**ಶಾರದಾ—** ಆಗಲಿ, ನಾನು ಬರಲೋ? ಇದೋ, ಇಷ್ಟು ಸಮಯ ತಮ್ಮ ಮನಕ್ಕೆ ಬಾರದ ಕೆಲ ಮಾತುಗಳನ್ನಾಡಿದ ನನ್ನನ್ನು ಕ್ಷಮಿಸಿ.

**ಹಿರಣ್ಯ—** ಛಿ, ಛೀ, ಅದೇನಿಲ್ಲ. ಈಗಿನ ಲೋಕಾಚಾರದಂತೆ ತಾವು ಮಾತುಗಳನ್ನಾಡಿದಿರಿ. (ತೆರೆಬೀಳುವದು)

**ಶಾರದಾ—** (ಮುಂದಕ್ಕೆ ಬಂದು) ಹಳೇ ಸಾಂಪ್ರದಾಯವಾದಿಗಳ ವಿಚಾರ ಗಳಲ್ಲಿ ವಿಶೇಷ ಸುಧಾರಣೆಯು ಬದಲಾವಣೆಯಾಗದಿದ್ದರೂ, ವಿಹಿತವಾದ ಸುಧಾ ರಣೆಯ ಮಾತುಗಳನ್ನಾದರೂ ಕೇಳಿಕೊಳ್ಳುವಷ್ಟು ಅವರಲ್ಲಿ ಔದಾರ್ಯವು ಬಂದಿದೆ. ಇದಾದರೂ ಪ್ರಗತಿಯ ಲಕ್ಷಣವೇ.

## ದ್ವಿತೀಯಾಂಕ ಸಮಾಪ್ತ

# ೩ನೆಯ ಅಂಕ

## ೧ನೆಯ ಪ್ರವೇಶ

( ಮಾಧವರಾಯನ ಮನೆಯ ಒಂದು ಕೋಣೆ. ಹೊಲಸಾದ ಹಾಸಿಕೆಯಲ್ಲಿ ಕುಷ್ಠರೋಗಪೀಡಿತನಾದ ಮಾಧವರಾಯನು ಮಲಿನ ವಸ್ತ್ರಗಳಲ್ಲಿ )

**ಮಾಧವ** — (ಅಳುತ್ತ) ಅಹಹಾ! ಇದೆಂಥ ಯಾತನೆ! ಮೈಯೆಲ್ಲ ತಿಂಡೆ ಯೆದ್ದು ಬಿಟ್ಟಿದೆ. ತುರಿಸಿಕೊಳ್ಳಬೇಕೆಂದರೇ ಬೆರಳುಗಳೇ ಕಳಚಿಹೋಗಿರುವಾಗ್ಗೆ ಉಗುರುಗಳೆತ್ತಿಂದ ಬರಬೇಕು! ಮಧ್ಯ ಮಧ್ಯದಲ್ಲಿ ಉಗುಪು ಬೇರೆ. ಮನೋರಮೇ, ಮನೋರಮೇ, (ಅಷ್ಟು ಜೋರಾಗಿ ಧ್ಯಾಶನದಲ್ಲಿ)

**ಮನೋ**— (ಬೇಜಾರ ಸ್ವರದಿಂದ) ಮತ್ತೇನು? ನಿಮ್ಮ ಸಲುವಾಗಿ ನನಗೊಂದು ಗಳಿಗೆ ಸಹ ವಿಶ್ರಾಂತಿಯಿಲ್ಲದಾಯಿತು. (ಸ್ವಗತ) ನಾಲ್ಕುಸಾವಿರ ರೂಪಾಯಿಗಳ ವರದಕ್ಷಿಣೆಯನ್ನು ಕೊಟ್ಟು ನಮ್ಮಪ್ಪನು ನನ್ನ ಕೊರಳಲ್ಲಿ ಇದೊಳ್ಳೇ ಗುದ್ದಿಯನ್ನು ತೂಗುಬಿಟ್ಟನು.

**ಮಾಧವ**— ಮನೋರಮೆ, ಮೈಯೆಲ್ಲ ಉರಿಯುವದು. ಮೇಲೆ ನೊಣಗಳ ಕಾಟಾ. ಈಗ್ಗೆ ಒಂದು ತಿಂಗಳಿಂದ ಈ ಹಾಸಿದ ಹಾಸಿಕೆಯನ್ನು ತೆಗೆದಿಲ್ಲ. ಹೇಸಿಕೆಯಾಗಿಬಿಟ್ಟಿದೆ. ಇಲ್ಲಿ ಮಲಗುವದಕ್ಕಿಂತಲೂ ಆ ಬೀದಿಯ ಪಕ್ಕದಲ್ಲಿ ಮಲಗುವದು ಲೇಸೆನಿಸುವದು.

**ಮನೋ**— ಹಾಗೆ ಮಾಡಲಿಕ್ಕೆ ನಿಮಗಾರು ಬೇಡವೆನ್ನುವರು?

**ಮಾಧವ**— ಅಂತೂ ನಾನು ಬೀದಿಯ ಹೆಣವಾಗಬೇಕೆಂದು ನಿನ್ನಪೇಕ್ಷೆ? ನನ್ನ ಸಹಧರ್ಮಚಾರಣಿಯಾಗಿ ನೀನಿಷ್ಟು ಕಠೋರವಾತುಗಳನ್ನಾಡಬಹುದೇ?

(ದೈನ್ಯದಿಂದ) ಅಯ್ಯೋ, ಅಯ್ಯೋ, ಸ್ವಲ್ಪ ಬೆನ್ನಮೇಲೆ ಕೈಯನ್ನಾದರೂ ಆಡಿಸ ಬಾರದೇ ? ನಿನಗೆ ಪುಣ್ಯಬರುವದು. ಅಹಹಾ ! ಏನು ಉರುಪು !

**ಮನೋ—** ಒಳ್ಳೇ ಕೆಲಸಾ ! ನಿಮ್ಮನ್ನು ನಾನು ಮುಟ್ಟಲೋ ? ಒಳ್ಳೇ ಕೆಲಸ ಹೇಳುವಿರಿ !

**ಮಾಧವ—** ನೀನು ನನ್ನ ಧರ್ಮಪತ್ನಿಯಲ್ಲವೇ ?

**ಮನೋ—** ಆದರೆ ! ನೀವು ಹೇಳಿದಂತೆ ಕುಣಿಯಬೇಕೇನು ? ಉತ್ತಮರ ಮಗಳಂತೇ ನಾನಿಷ್ಟು ದಿನಗಳತನಕ ನಿಮ್ಮಂಥ ಕುಷ್ಠರೋಗಿಗಳ ಮನೆಯಲ್ಲಾದರೂ ಇದ್ದೇನೆ. ಮತ್ತೊಬ್ಬಳಾಗಿದ್ದರೆ ನಿಮ್ಮ ಗಾಳಿಯನ್ನಾದರೂ ಬಡಿಸಿಕೊಳ್ಳುತ್ತಿದ್ದಳೆ ?

**ಮಾಧವ—** ಬಹು ಉಪಕಾರಮಾಡಿದಿ ? ಎಲೇ ಕಠೋರ ಹೆಣ್ಣೇ, ಎಷ್ಟು ಬಡಿವಾರ ಬಡಿಯುವಿಯೋ ? ಮನೆಯಲ್ಲಿದ್ದು ನೀನು ನನಗೆ ಮಾಡಿದ್ದಾದರೂ ಏನು ? ಅನ್ನನೀರುಗಳನ್ನು ಮಾತ್ರ ಹಾಕುತ್ತಿರುವಿ; ಅದೂ ದೂರಿಂದಲೆ. ಅಷ್ಟು ಯಾರಾದರೂ ಮಾಡಿಯೇ ಮಾಡುವರು. ನಿನ್ನದೇನು ದೊಡ್ಡಿಸ್ಥಿಕೆಯೋ?

**ಮನೋರ—** ನೀವಿಂತಹ ಕೃತಘ್ನರಂತೇ ದೇವರು ನಿಮಗೀ ಸ್ಥಿತಿಯನ್ನು ತಂದಿದ್ದಾನೆ. ನಿಮ್ಮಂಥವರಿಗೆ ಎಷ್ಟು ಮಾಡಿದರೂ ಅಷ್ಟೇ !

**ಮಾಧವ—** ಯಾರ ಉಪಕಾರಕ್ಕೆ ಮಾಡುವಿ? ನಿನ್ನ ಕರ್ತವ್ಯವನ್ನು ನೀನು ತಕ್ಕ ಮಟ್ಟಿಗೆ ಮಾಡುವಿ. ಅದರ ಉಪಕಾರವನ್ನು ಯಾರ ಮೇಲೆ ಹೊರಿಸುವಿ ? ಮನೋರಮೇ, ನೀನು ಸರಿಯಾಗಿ ನನ್ನ ಆರೈಕೆಯನ್ನು ಮಾಡಲೇಬೇಕು.

**ಮನೋ—** ಮಾಡುವಷ್ಟು ಮಾಡಿಯೇ ಮಾಡುವೆನು. ಅದೆಲ್ಲ ಬಿಟ್ಟು ಮುಟ್ಟು-ತಟ್ಟುಯೆಂದರೆ ನಾನೇನು ಹಾಗೆ ಮಾಡತಕ್ಕವಳಲ್ಲ. ನಿಮ್ಮಂತಹ ಅಂಟು ರೋಗಗ್ರಸ್ತರಾದವರನ್ನು ಮುಟ್ಟಿ ನಾನು ಸಹ ನಿಮ್ಮಂತೆ ಹೀಗಾಗಿ (ಅಣಿಕಿಸಿ) ಕುಳಿತುಕೊಂಡರೆ ನಿಮಗೆ ಬಹೂ ಸಮಾಧಾನವಾದೀತಲ್ಲವೆ? (ಸರ್ರನೆ ಹೋಗುವಳು.)

**ಮಾಧವ—** ಥೂಃ ಪಾಪಿಣೀ ಅಣಕಿಸುವಿಯಾ ! (ಅಳುತ್ತ) ಅಯ್ಯೋ

ಏನಪಮಾನವಿದು ! ಇದನ್ನು ಹೇಗೆ ಸಹಿಸಲಿ ! ದೇವಾ ! ಬೇಗನೇ ನಾವು ಏತಕ್ಕೆ ತರಲೊಲ್ಲೆ ! ಜಗತ್ತಿನಲ್ಲಿ ಈ ಕೀಳಜನ್ಮದ್ದ ಅಗತ್ಯವಾಗಿದೆ ? ಏತಕ್ಕಿದನ್ನು ಬದುಕಿಸಿರುವಿ? ಹಾ! ಶಾರದೇ, ಸಾಧ್ವೀ ನಿನ್ನ ಶಾಪದೊಳಗಿನ ಒಂದಕ್ಷರವಾದರೂ ಹುಸಿಹೋಗಲಿಲ್ಲ. ಅಷ್ಟದಿಕ್ಪಾಲಕರ ಮತ್ತು ಅಸ್ತಾಚಲವನ್ನೇರುವ ಸೂರ್ಯನಾರಾಯಣನ ಸಾಕ್ಷಿಯಾಗಿ ಕೊಟ್ಟ ವಚನವನ್ನು ಪಾಲಿಸದ ಅಧಮ ನಾನು. ಸಮಾಜನಿಂದೆಗೆ ಹೆದರಿ ನಿನ್ನನ್ನು ಆತ್ಮಹತ್ಯೆ ಮಾಡಿಕೊಳ್ಳುವಂತೆ ಮಾಡಿದ ಮಹಾಪಾತಕಿ ನಾನು. ಅಂದು ನೀನು ನನ್ನನ್ನು ದೇವರಿಗೆ ಬೇಡಿಕೊಳ್ಳುವಂತೆ ಅಂಗಲಾಚಿ ಬೇಡಿಕೊಂಡೆಯಲ್ಲವೇ? ಆ ಸಮಯಕ್ಕೆ ಪ್ರತ್ಯಕ್ಷ ಕಲಿಪುರುಷನಾದ ನಾನು ನಿನಗೆ ಆಡಬಾರದ ಮಾತುಗಳನ್ನಾಡಿದೆನಲ್ಲವೇ ? ಅದೆಲ್ಲ ಸಹಿಸಿ ಗೋಳಾಡಿ ಅಳುತ್ತ "ನಾಥಾ ನಾನು ನಿಮ್ಮ ಧರ್ಮಪತ್ನಿಯು; ಲೌಕಿಕದಂತೆ ಪುನರ್ವಿವಾಹ ಮಾಡಿಕೊಳ್ಳಿರೆಂದು" ಗಟ್ಟಿಯಾಗಿ ಕಾಲು ಹಿಡಿದ ನಿನ್ನನ್ನು ಭಂಡನಾದ ನಾನು ಝಾಡಿಸಿ ಒದ್ದೆನಲ್ಲವೇ? ಹೊಟ್ಟೆಗೆ ಪೆಟ್ಟು ಬಿದ್ದದ್ದಕ್ಕೆ ಗರ್ಭವತಿಯಾದ ನೀನು ಕಳವಳಗೊಂಡು ಹೊರಳಾಡಿದೆ. ಆಗಿನ ನಿನ್ನ ವಿಲಾಪವನ್ನು ಕೇಳಿ ಕಲ್ಲು ಸಹ ಕರಗಿರಬಹುದು. ಆದರೆ ಮಹಾ ಕಠೋರನಾದ ನನ್ನ ಮನವು ಮಾತ್ರ ಕರಗಲಿಲ್ಲ ! ಅನಾಥ ಶಾರದೇ, ಪ್ರೇಮಮಯೀ ! ಶಾರದೇ ! ನಿಷ್ಪಾಪ ಶಾರದೇ ! ಕೊನೆಗೆ ನೀನು ಸಂತಾಪದಿಂದ ಶಾಪವನ್ನು ಕೊಟ್ಟು ಮಣ್ಣು ತೂರಿದೆ. ಆಗ್ಗೆ ಮಾತ್ರ ತೋರಿಕೆಯಲ್ಲಿ ಧೈರ್ಯಶಾಲಿಯಂತೆ ನಟಿಸಿದರೂ ಮನದಲ್ಲಿ ಮಾತ್ರ ನಡುಗಿದೆನು. ಶಾರದೇ, ವಿಶ್ವಾಸವನ್ನು ಕೊಟ್ಟಂತೆ ನಿರ್ಮಲೆಯಾದ ನಿನ್ನೊಡನೆ ನಾನು ಪುನರ್ವಿವಾಹವನ್ನು ಮಾಡಿಕೊಂಡಿದ್ದರೆ ಈಗ್ಗೆ ನಿಜವಾಗಿಯೂ ಸ್ವರ್ಗಸುಖವನ್ನನುಭವಿಸುತ್ತಿದ್ದೆನು. ಆದರೆ ನನ್ನ ಹಣೇಬರಹದಲ್ಲಿ ಅದೆಲ್ಲಿ ಬರೆದಿದೆ? ಹೀಗೆ ನಾಯಿಗಿಂತಲೂ ಕಡೆಯಾಗಿ ಬಾಳುವ ದೈವಗೇಡಿ ನಾನು. ಅಯ್ಯೋ ! ಏನು ಸೊಣಗಳ ಕಾಟ. ಬೈಲೊಳಗೆ ಗಾಳಿಯಲ್ಲಾದರೂ ಬಿದ್ದುಕೊಳ್ಳಲೊ ! (ತೇಕುತ್ತ ಹೋಗುವಷ್ಟರಲ್ಲಿ ಪದ್ಮನಾಭಾಚಾರ್ಯ ಶಾರದಾ ಕುಮಾರ ಕಮಲಾ ಮುಂತಾದವರು ಬರುವರು.)

ಪದ್ಮ — ಇದೇನು ? ಮಾಧವರಾಯರೇ ಎಲ್ಲಿಗೆ ಹೋಗಬೇಕೆನ್ನುವಿರಿ?

**ಮಾಧವ—** ಪದ್ಮನಾಭಾಚಾರ್ಯರೇ, ಸ್ಮಶಾನಕ್ಕೆ ಹೋಗಬೇಕೆನ್ನು ವೆನು. ದೇವರು ಅಪ್ಪಣೆಯನ್ನು ಕೊಡಲೊಲ್ಲನು.

**ಶಾರದಾ—** ಇವರೇಯೊ ಖಾದೀ ಕಾರ್ಯಾಲಯಕ್ಕಾಗಿ ಆ ದೊಡ್ಡ ಅರಮನೆಯನ್ನು ದಾನ ಮಾಡಿದವರು ? ಅಯ್ಯೋ. ಪಾಪ ! ಏನಾಗಿ ಹೋಗಿದೆ ಇವರ ಅವಸ್ಥೆ ?

**ಪದ್ಮ—** ಅಹುದು. ದೇವಿಯವರೇ ಇವರೇ. ಮನೆಯಲ್ಲಿ ಮನೋರಮಾ ಬಾಯಿಯವರಿಲ್ಲವೇ ?

**ಮನೋ—** (ಬರಬರುತ್ತ) ಇದ್ದೇನೆ, ಇದ್ದೇನೆ, ಆಚಾರ್ಯರೇ, ಇದೋ ಬಂದೆ. ಬೇನೆಯುಳ್ಳವರಾದ ತಾವು ಸ್ವಲ್ಪವಾದರೂ ಸೈರಣೆಯಿಂದಿರಬೇಕೋ ಬೇಡವೋ ! ಒಂದೇ ಸವನೆ ಪೇಚಾಡುತ್ತಾರೆ ನೋಡಿರಿ. ದೇವರು ಅಂತಹ ಪ್ರಸಂಗ ವನ್ನೇ ತಂದಿಟ್ಟಿದ್ದಾನೆ. ಅದಕ್ಕಾರೇನು ಮಾಡತಕ್ಕದ್ದು ? ಮುಖ್ಯವಾಗಿ ನನ್ನ ದೈವವೇ ಖೊಟ್ಟಿ, ಏನಂಬರೇನು !

**ಶಾರದಾ—** ಇವರಿಷ್ಟೇಕೆ ಮಲಿನರಾಗಿದ್ದಾರೆ ? ಇವರಿಗೆ ನಿತ್ಯದಲ್ಲಿಯೂ ಸ್ನಾನ ಮಾಡಿಸುವದಿಲ್ಲವೇನು ? ಬಟ್ಟೆಬರೆಗಳಂತೂ ಅತಿ ಹೊಲಸಾಗಿ ಬಿಟ್ಟಿವೆ.

**ಮನೋ—** ಸ್ನಾನವನ್ನು ಹೇಗೆ ಮಾಡಿಸಬೇಕು ? ಯಾರೂ ಮುಟ್ಟಬಾರ ದಂತಹ ಬೇನೆಯೇ ಇವರಿಗೆ ಗಂಟು ಬಿದ್ದಿದೆ. ಮನೆಯೊಳಗಿನ ಆಳುಗಳೆಲ್ಲವೂ ಇವರ ಗಾಳಿಯೂ ಸಹ ತಗಲಬಾರದೆಂದು ಬಿಟ್ಟು ಹೋದವು. ಉಳಿದೆ ನಾನೊಬ್ಬಳೇ!

**ಮಾಧವ—** ನೀನಾದರೂ ಹೋಗಬಹುದಾಗಿತ್ತು. ಯಾರು ಬೇಡವೆಂದಿ ದ್ದರು ?

**ಮನೋ—** ನೋಡಿ ನೋಡಿ; ಬೆಳಗಿನಿಂದ ಬೈಗಿನವರೆಗೂ ಇಂತಹ ವಕ್ರ ಮಾತುಗಳೇ. ಆಳುಗಳು ಮಾಡಿದಂತೆ ನನಗೆ ಮಾಡಲಿಕ್ಕೆ ಬಂದೀತೇ? ಸೌಭಾಗ್ಯದಾಧಾರವನ್ನು ಸತಿಯು ಎಂದಾದರೂ ಬಿಟ್ಟುಹೋಗತಕ್ಕವಳೇ ?

**ಮಾಧವ—** ಸತಿಯಾದವಳು ಬಿಟ್ಟು ಹೋಗುತ್ತಿರಲಿಕ್ಕಿಲ್ಲ. ಆಚಾರ್ಯರೇ, ಈ ಹೊರ್ವಮಾಲೆಯು ಸೌಭಾಗ್ಯದಾಧಾರವನ್ನು ಹಿಡಿದು ನನ್ನ ಮನೆಯಲ್ಲಿ

ನಿಂತುಕೊಂಡಿಲ್ಲ. ಬರೀ ಭಾಗ್ಯದಾಧಾರಕ್ಕಾಗಿಯೇ ನಿಂತಿದ್ದಾಳೆ. ಮತ್ತು ಸೌಭಾಗ್ಯ ಹೋಗುವ ಹಾದಿಯನ್ನೇ ನೋಡುತ್ತಿದ್ದಾಳೆ.

**ಶಾರದಾ—** ರಾಯರೇ, ಬಿಡಿರಿ ಪಾಪ! ಅವರಿಗಷ್ಟು ಮನಸ್ಸಿಗೆ ಹತ್ತುವಂಥ ಮಾತುಗಳನ್ನಾಡಬಾರದು.

**ಮಾಧವ—** ತಾಯೀ, ಸ್ವಲ್ಪಾದರೂ ಇವಳು ನನ್ನಾರೈಕೆಯನ್ನು ಮಾಡುತ್ತಿದ್ದರೆ ಈ ರೋಗವು ಇಷ್ಟು ಹೆಚ್ಚಾಗುತ್ತಿದ್ದಿಲ್ಲ. ಇದೋ, ನೋಡಿ. ಈ ಭಾಗವು ಕೊಳೆಯುತ್ತ ನಡೆದಿದೆ. ಚನ್ನಾಗಿ ಸಾಬೂನು ಹಚ್ಚಿ ತಿಕ್ಕಿ ತೊಳೆದು ಮೇಲೆ ಡಾಕ್ಟರರು ಕೊಟ್ಟ ಔಷಧಿಯನ್ನು ದಿನಾಲು ಹಚ್ಚುತ್ತಿದ್ದರೆ, ಎಷ್ಟೋ ಗುಣವಿರುತ್ತಿತ್ತು. ಆದರೆ ನನ್ನನ್ನಾರು ಮುಟ್ಟಬೇಕು? ಹೀಗೆಯೇ ಕೊಳೆಯುತ್ತ ಸಾಯುವ ಭೋಗವಿದೆ. ಅಯ್ಯೋ! ಉರುಪು ಈ ಯಾತನೆಗಳನ್ನು ಹೇಗೆ ತಾಳಲಿ. ಶಾರದೇ ದೇವೀ, ನಿನ್ನ ಶಾಪವು ಎಂದೂ ಸುಳ್ಳಾಗದು. ನಾನು ಮಹಾಚಾಂಡಾಲನು. ಗರ್ಭಿಣಿಯಾಗಿದ್ದ ನಿನ್ನನ್ನು ದುಃಶಬ್ದಗಳಿಂದ ತಾಡಿಸಿ ಮೇಲೆ ಒದ್ದೆನಲ್ಲವೇ? (ಅಳುವನು.)

**ಪದ್ಮನಾಭ—** ಗತಗೋಷ್ಟಿಗಳನ್ನು ನೆನೆದು ಪ್ರಯೋಜನವೇನು? ಮಾಧವರಾಯರೇ, ಅದರಿಂದ ನಿಮ್ಮ ಪ್ರಕೃತಿಯು ಹೆಚ್ಚಾಗಿ ಕೆಡುವವಲ್ಲದೆ ಫಲಿತಾಂಶವೇನೂ ಹೊರಡಲಾರದು.

**ಶಾರದಾ—** ಇವರಿಗೆ ಶಾಪವನ್ನು ಕೊಟ್ಟ ಆ ಶಾರದಾದೇವಿಯುವರೆನ್ನುವವರಾರು? ಇವರ ಪತ್ನಿಯುವರೋ?

**ಮಾಧವ—** ಅಹುದಮ್ಮಾ, ಅವಳು ನನ್ನ ಧರ್ಮಪತ್ನಿಯು. ಬಹು ಗುಣವತಿಯು. ಚಾಂಡಾಲನಾದ ನಾನವಳನ್ನು ವಂಚಿಸಿದೆನು.

**ಪದ್ಮನಾಭ—** ಆ ಕಥೆಯು ಬಹು ವಿಸ್ತಾರವಾಗಿದೆ, ಅವಕಾಶವಿದ್ದಾಗ್ಗೆ ಹೇಳುವೆನು. ಮಾಧವರಾಯರೇ ಇವರು ಅಪ್ಪಾಜಿಯವರ ಆಶ್ರಮದಿಂದ ಬಂದ ದೇಶಸೇವಿಕೆಯರು. ಇವರೋ, ಈ ಯುವಕನು ಇವರ ಮಗನು. ಇವರೀರ್ವರು ನೇಯುವ ಮತ್ತು ನೂಲುವದರಲ್ಲಿ ಬಹು ಕುಶಲರೆಂದು ಅಪ್ಪಾಜಿಯವರು

ನಮ್ಮ ವಿಜ್ಞಾಪನೆಯ ಮೇರೆಗೆ ಇಲ್ಲಿ ಸ್ಥಾಪಿಸಿರುವ ಖಾದೀ ಕಾರ್ಯಾಲಯದ ಸಹಾಯಕ್ಕಾಗಿ ಕಳುಹಿಸಿದ್ದಾರೆ. ಇವರು ಆಯುರ್ವೇದವನ್ನೂ ಬಲ್ಲರು. ಅದರ ರಿಂದ ತಮ್ಮನ್ನು ನೋಡುವದಕ್ಕೆ ಬಂದಿದ್ದಾರೆ. ಮಾತಾಜೀ, ಇವರ ಪ್ರಕೃತಿಯ ವಿದ್ಯಮಾನಗಳೆಲ್ಲವೂ ಗೊತ್ತಾಗಿರಬಹುದಲ್ಲವೇ ?

**ಶಾರದಾ**—ತಿಳಿದಂತಾಯಿತು. ಅಪ್ಪಾಜಿಯವರ ವಚನದಂತೆ ಇವರ ರೋಗ ನಿವಾರಣೆಯಾಗಬಹುದೆಂದು ನನಗೆ ವಿಶ್ವಾಸ. ಯಾಕೆಂದರೆ ತಾವು ಪತ್ರದಲ್ಲಿ ಇವರ ಸ್ವಾರ್ಥತ್ಯಾಗದ ವಿಷಯವನ್ನು ಬರೆದಿದ್ದಿರಿ.

**ಮಾಧವ**— ಆಚಾರ್ಯರೇ, ನನ್ನಂತಹ ನರಕದೊಳಗಿನ ಕ್ರಿಮಿಯ ಹೆಸರನ್ನು ಆ ಮಹಾತ್ಮರ ಕಿವಿಗೆ ಏಕೆ ಹಾಕಿದಿರಿ ?

**ಶಾರದಾ**— ಸದ್ಯಕ್ಕೆ ಒಂದು ಕೆಲಸವನ್ನು ಮಾಡಿರಿ. ಈ ಊರ ಹೊರ ಭಾಗದಲ್ಲಿ ಒಂದು ಗುಡಿಸಲವನ್ನು ಹಾಕಿಸಿ ಅಲ್ಲಿ ಇವರನ್ನಿರಿಸಿರಿ. ನಾನು ಮತ್ತು ಕುಮಾರನು ಇಬ್ಬರೂ ಸೇರಿ ಇವರಿಗೆ ಚಿಕಿತ್ಸೆಯನ್ನೂ ಉಪಚಾರವನ್ನೂ ಮಾಡುವೆವು. ಇದು ಅಂಟುರೋಗವಿದೆಯಾದರೂ ಅಪ್ಪಾಜಿಯವರ ಕೃಪೆಯಿಂದ ನಮಗಿದರ ಭಯವಿಲ್ಲ. ಧೈರ್ಯವಿದ್ದರೆ ಇವರ ಪತ್ನಿಯವರೂ ನಮ್ಮ ಗೂಡ ಇವರ ಶುಶ್ರೂಷಾಕಾರ್ಯದಲ್ಲಿ ನೆರವಾಗಬಹುದು.

**ಮಾಧವ**— ಅಹಹ ! ಪುಣ್ಯವಂತರೇ, ನೀವು ಮಾನವರಲ್ಲ ! ದೇವತೆಗಳು. ನಿಮ್ಮ ದಯಾಶೀಲತೆಯನ್ನು ಹೇಗೆ ವರ್ಣಿಸಲಿ ?

**ಕಮಲಾ**— ಅಪ್ಪಾ, ಮಾತಾಜಿಯವರಿಗೆ ನೆರವಾಗಲಿಕ್ಕೆ ನೀನು ನನಗೆ ಸಹ ಅಪ್ಪಣೆಯನ್ನು ಕೊಡಬೇಕು ನೋಡು. ಮೊದಲೇ ಹೇಳಿದ್ದೇನೆ.

**ಪದ್ಮನಾಭ**— ಮಗೂ, ಕಮಲಾ, ಅಗತ್ಯವಾಗಿ ನೆರವಾಗು. ನಿನ್ನನ್ನು ನಾನು ಅವರ ಉಡಿಯಲ್ಲಿ ಹಾಕಿ ಬಿಟ್ಟಿದ್ದೇನೆ. ಮಾತಾಜೀ, ಈ ಧರ್ಮವೀರರ ಸೇವೆಯಲ್ಲಿ ನನ್ನ ಕುಮಾರಿಯನ್ನು ಸಹ ತಕ್ಕೊಳ್ಳಿರಿ.

**ಶಾರದಾ**— ಅಗತ್ಯವಾಗಿ ತಕ್ಕೊಳ್ಳುವೆನು. ರೋಗಿಗಳ ಶುಶ್ರೂಷೆಯಲ್ಲಿ ಹೆಣ್ಣುಮಕ್ಕಳು ನುರಿತವರಾಗಿರುವದಾದರೆ ಬಾಲ್ಯದಿಂದಲೇ ಅವರಿಗವರ ರೂಢಿಯನ್ನು ಮಾಡಿಸುವದುತ್ತಮ !

**ಮಾಧವ**—ಅಹಹಾ! ನಿಮ್ಮ ಉಪಕಾರವನ್ನು ಹೇಗೆ ತೀರಿಸಲಿ! ನನಗಾರೂ ದಿಕ್ಕಿಲ್ಲವೆಂತಲೂ ಹಾದಿಯ ಹೆಣವಾಗಿ ಸಾಯುವೆನೆಂತಲೂ ತಿಳಿದುಕೊಂಡಿದ್ದೆನು. ದೇವರು ನಿಮ್ಮಿಬ್ಬರಿಗೂ ಒಳಿತು ಮಾಡಲಿ !!

**ಪದ್ಮ**— ಹಾಗಾದರೆ ಈ ದಿನ ಸಾಯಂಕಾಲದೊಳಗಾಗಿ ಮಾತಾಜಿಯವರು ಹೇಳಿದಂತೆ ಏರ್ಪಾಟು ಮಾಡಿ ಬೆಳಿಗ್ಗೆ ತಮ್ಮನ್ನಲ್ಲಿಗೆ ಕರೆದುಕೊಂಡು ಹೋಗುವೆವು! ಇದೊಂದು ದಿನ ತಾವು ಹೇಗಾದರೂ ಇಲ್ಲಿ ಕಳೆಯಿರಿ. ( ಹೋಗುವರು. ತೆರೆ ಬೀಳುವದು. )

---

## ೨ನೆಯ ಪ್ರವೇಶ

**ಮನೋ**— ಅಹಹ! ಇದೆಂತಹ ಅನುಕೂಲ! ನಾಳಿಗೆ ನಮ್ಮ ಈ ಕೊಳಕ ಯಜಮಾನರು ಮನೆಯನ್ನು ಬಿಡುವರು. ಸುಮ್ಮನೆ ಕಿಟಕಿಟಿ. ಆಗಲಿಲ್ಲ, ಹೋಗಲಿಲ್ಲ. ಇದು ಗುಣವಾಗುವ ರೋಗವೇ? ಮೊದಲೇ ಹಿರೇರೋಗ, ಉಂ! ಅದೇನಾದರೂ ಆಗಿಕೊಳ್ಳಲಿ. ನನಗೇನು? ನಾನು ಮನಸೋಕ್ತ ಸುಖಬಡತಕ್ಕವಳೇ. ನಾಲ್ಕು ಸಾವಿರ ರೂಪಾಯಿ ವರದಕ್ಷಿಣೆಗಾಗಿ ದಂಡ ಬಡಿದು ನಮ್ಮಪ್ಪನು ಈ ರಾಯರ ಮನೆಯಲ್ಲಿ ನನ್ನನ್ನು ಕಷ್ಟಬಡುವದಕ್ಕಾಗೇನು ಹೊಗಿಸಿಲ್ಲ. ಆದರೂ ಮನಸೋಕ್ತ ಸುಖಬಡುವದಕ್ಕೆ ಈ ರೋಗಿಷ್ಟ ರಾಯರು ನನಗೆ ಬಹು ಮುಳ್ಳವಾಗಿ ಬೆಳಿತಿದ್ದಾರೆ. ಅದೋ! ನನ್ನ ಪ್ರಿಯಕರನು ಹಿತ್ತಲ ಬಾಕಿಲ ಬಾರಿಸುತ್ತಲಿದ್ದಾನೆ. ಬಂದೆ ನಿಲ್ಲು ಭಗೀರಥಾ! (ಹೋಗಿ ಬಾಗಿಲ ತೆರೆದು ಕರೆತರುವಳು)

**ಭಗೀ**— ( ನಖಶಿಖಾಂತ ಖಾದಿ ಉಡುಪಿನ ಕಾಲೇಜಕ್ಕೆ ಶರಣು ಹೊಡೆದ ನಾಗಾಭಟ್ಟರ ಚಿರಂಜೀವ; ಸ್ವಲ್ಪ ಕಿರುದನಿಯಿಂದ ) ಮಾಧವರಾಯರೇನು ಮಾಡುತ್ತಿರುವರು?

**ಮನೋ**— ಬಿದ್ದಿದ್ದಾರೆ, ಆಚೆಕಡೆಯ ಕೋಣೆಯಲ್ಲಿ ಕೊಳೆಯುತ್ತ! ಅದಿರಲಿ! ಮಾಯ ಡೀಯರ್, ನೀವೀ ದರಿದ್ರ ವೇಷವನ್ನು ಬಿಡುವದಿಲ್ಲವೇ! ನನಗಿವೆಷ್ಟೇಷ್ಟೂ ಚಂದಕಾಣುವದಿಲ್ಲ. ಅಷ್ಟು ದರಿದ್ರ ವೇಷ!

**ಭಗೀ—** ಈಗಲೇ ಇದನ್ನು ಬಿಡಲಿಕ್ಕೆ ಬರುವದಿಲ್ಲ! ಇದರಿಂದಲೇ ಸಮಾಜದಲ್ಲಿ ಗೌರವವಿದೆ ನೋಡು!

**ಮನೋ—** ಆ ಸಮಾಜದ ಗೌರವವನ್ನು ತೆಗೆದುಕೊಂಡು ಏನು ಮಾಡುವದು? ಇರುವ ತನಕ ಉಂಡುಟ್ಟು ಸುಖಪಟ್ಟರಾಯಿತು. ಆದದರಿಂದ ನನ್ನ ಸಲುವಾಗಿ ಆದರೂ ನೀವೀ ಕೈದಿಗಳ ವೇಷವನ್ನು ಬಿಡಲೇಬೇಕು.

**ಭಗೀ—** ಪ್ರಿಯೇ! ಇಷ್ಟು ನೀನು ಕಲಿತವಳಾಗಿದ್ದರೂ ನಿನ್ನಲ್ಲಿ ಸಾಕಷ್ಟು ವಿಚಕ್ಷಣತೆಯು ಬಂದಿಲ್ಲ ನೋಡು! ನಾನೀ ವೇಷವನ್ನು ತಕ್ಷಣವೇ ಬಿಟ್ಟುಕೊಟ್ಟರೆ ಸಮಾಜವು ಇದರ ಕಾರಣದ ಶೋಧಕ್ಕೆ ನಿಲ್ಲುವದು. ಆಗ್ಗೆ ಅಕಸ್ಮಾತ್ತಾಗಿ ನಮ್ಮ ರಹಸ್ಯವು ಬೈಲಿಗೆ ಬಿದ್ದರೆ ವೃಥಾ ಅಪಮಾನಕ್ಕೆ ಗುರಿಯಾಗಬೇಕಾದೀತು. ನಿನಗೇನು ಹೇಳಲಿ! ಈ ಖಾದೀ ಬಟ್ಟೆಯು ನಮ್ಮ ಎಲ್ಲ ಕೃಷ್ಣಕಾರಸ್ಥಾನಗಳ ಮೇಲೆ ಮುಸುಕು ಹಾಕಿ ಬಿಟ್ಟಿದೆ. ನಾನೀ ದೇಶಭಕ್ತನ ವೇಷವನ್ನು ಹಾಕಿಕೊಂಡಿರುವೆನೆಂತೇ ನಿನ್ನ ಗಂಡನು ಯಾವಾಗಲೂ ಮನೆಗೆ ಬರುಹೋಗುವ ನನ್ನ ವಿಷಯವಾಗಿ ಸಂಶಯವನ್ನು ಕೊಂಡಿಲ್ಲ. ನಿನ್ನ ಸಲುವಾಗಿ ನಾನು ಕಾಲೇಜಕ್ಕೆ ಶರಣುಹೊಡೆದೆನಾದರೂ ಈ ದೇಶಭಕ್ತನ ವೇಷವು ಅದಕ್ಕೆ ಬೇರೆಯಾದ ಗೌರವದ ಅರ್ಥವನ್ನು ಮಾಡಿಸುತ್ತಲಿದೆ. ಈ ವೇಷದ ಬಲದಿಂದಲೇ ಪದ್ಮನಾಭಾಚಾರ್ಯರ ಖಾದೀ ಕಾರ್ಯಾಲಯಕ್ಕೆ ನಾನು ಗೌರವ ಕಾರ್ಯದರ್ಶಿಯಾಗಿದ್ದೇನೆ. ವಿಶೇಷವೇನು? ನಮ್ಮ ನಿಮ್ಮ ವ್ಯವಹಾರವು ರಹಸ್ಯವಾಗಿ ನಡೆಯುವ ಅಗತ್ಯವಿರುವತನಕ ಈ ವೇಷವನ್ನು ಬಿಡಲಿಕ್ಕೆ ಬರುವದಿಲ್ಲ, ನೋಡು.

**ಮನೋ—** ಹೀಗೆಯೇ ಅಂಜಿಕೊಂಡು ಎಷ್ಟು ದಿವಸ ಕಳೆಯಬೇಕು?

**ಭಗೀ —** ನಿನ್ನ ಗಂಡ ಬದುಕಿರುವತನಕ! ಆ ಮೇಲೆ ಸುಖವಾಗಿ ಪುನರ್ವಿವಾಹವನ್ನು ಮಾಡಿಕೊಳ್ಳುವಾ!!

**ಮನೋ—** ಇದೋ, ಹೇಳಲಿಕ್ಕೆ ಮರೆತೆ. ನಿಮ್ಮ ಖಾದೀ ಕಾರ್ಯಾಲಯದ ಸಲುವಾಗಿ ಆ ದೇಶಸೇವಿಕೆಯೊಬ್ಬಳು ಬಂದಿರುವಳಲ್ಲವೇ? ಅವಳೇನೋ ನಮ್ಮ ಯಜಮಾನರ ರೋಗವನ್ನು ನಿವಾರಿಸುವಳಂತೆ! ಅದಕ್ಕಾಗಿ ಅವರನ್ನು ನಾಳಿನಿಂದ ಚಿಕಿತ್ಸೆಗಾಗಿ ಬೇರೆ ಸ್ಥಳಪಲ್ಲಿಂಸುವ ಏರ್ಪಾಟು ಮಾಡಿದ್ದಾರೆ.

**ಭಗೀ—** ಬಹು ಅನುಕೂಲ. ಮನೆಯಲ್ಲೆಲ್ಲಾ ನಮ್ಮ ಕಾರಭಾರವೇ ಆಗುವದು! ಮನೋರಮೆ, ಆ ದೇಶಸೇವಿಕೆಯು ನಿನ್ನ ಗಂಡನ ರೋಗ ನಿವಾರಣೆಯನ್ನು ಮಾಡುವಷ್ಟರಲ್ಲಿ ತಾನೊಂದು ಅವನಂತೆ (ಆಣಕಿಸಿ) ಹೀಗಾಗದಿರಲಿ !! ಬಿಡು ಹಾಳಹರಟೆ (ಕೈಹಿಡಿದು ಮುಂಜಗ್ಗಿ ಆಲಿಂಗಿಸಬೇಕೆನ್ನುವಷ್ಟರಲ್ಲಿ ಮಾಧವರಾಯರು ತೇಕುತ್ತ ಒಳಗೆ ಬರುವರು.)

**ಮನೋ—** (ಗಾಬರಿಯಾಗಿ) ಅಯ್ಯೋ, ಇದೇನು ಕಷ್ಟ ?

**ಭಗೀ** — (ಮಾಧವರಾಯನನ್ನು ನೋಡಿ ಲಟ್ಟನೆ ಕಿಸೆಯೊಳಗಿಂದ ಬಳೆಯನ್ನು ತೆಗೆದು ಅವಳ ಕೈಗೇರಿಸುತ್ತ) ಸ್ವಲ್ಪ ನಿದಾನಿಸಿ, ಅತ್ತಿಗೆಯವರೇ, ನೀವು ಬಹು ಕೋಮಲ ಪ್ರಕೃತಿಯವರು. ಮಾಧವರಾಯರೇ, ಅತ್ತಿಗೆಯವರು ಬಹು ಮಿದುವಾದ ಹೆಣ್ಣುಮಕ್ಕಳು. ಈ ದೇಶೀ ಬಳೆಗಳನ್ನಿಡುತ್ತಿರುವೆನು; ಅದಕ್ಕೆ ಎಷ್ಟು ರಂಧೆಯನ್ನು ಮಾಡುತ್ತಲಿದ್ದಾರೆ ? ಅತ್ತಿಗೆಯವರೇ ಸ್ವಲ್ಪ ನಿದಾನಿಸಿರಿ. ಸ್ವಲ್ಪ ನಿದಾನಿಸಿರಿ (ಬಳೆಯಿಡುವನು.)

**ಮಾಧ—** (ಆಶ್ಚರ್ಯದಿಂದ) ಮನೋರಮೆ, ನನ್ನ ಮನೋರಮೆಯು ದೇಶೀ ಬಳೆಗಳನ್ನಿಟ್ಟುಕೊಳ್ಳುತ್ತಿರುವಳೇ ? ಅಂತೂ ಭಗೀರಥ ಭಟ್ಟರೇ, ನೀವು ಹೆಸರಿಗೆ ತಕ್ಕಂತೆ ಭಗೀರಥ ಪ್ರಯತ್ನದಿಂದ ಇವಳಿಗೆ ಸ್ವದೇಶೀ ದೀಕ್ಷೆಯನ್ನು ಕೊಟ್ಟಿರಿ. ಖಾದಿಯನ್ನು ಧರಿಸುವದಕ್ಕಾಗಿ ಪದ್ಮನಾಭಾಚಾರ್ಯರು ಇವಳಿಗೆಷ್ಟು ಬಗೆಯಾಗಿ ಹೇಳಿದರೂ ಅವರ ಹೇಳಿಕೆಯು ನಾಟಲಿಲ್ಲ. ನೀವು ಒಳ್ಳೇ ಚತುರರು. ಎಷ್ಟಾದರೂ ಉಚ್ಚತರಗತಿಯ ಶಿಕ್ಷಣವನ್ನು ಪಡೆದವರು. ನಿಮ್ಮಷ್ಟು ಬುದ್ಧಿವಂತಿಕೆಯು, ಪಾಪ, ಆ ವರ್ಕಶಾಪಿನ ಮುತ್ಸಾಳಿ ಕೂಲಿಗಳ ಸಹವಾಸದಲ್ಲಿ ಕಾಲಹರಣಮಾಡಿದ ಪದ್ಮನಾಭಾಚಾರ್ಯರಲ್ಲಿ ಹೇಗೆ ಬಂದೀತು ? ಅಂತೂ ನನ್ನ ಮನೋರಮೆಯು ದೇಶೀಕಂಕಣಗಳನ್ನಿಟ್ಟುಕೊಂಡಳು !

**ಭಗೀ** — ದೇಶಕಾರ್ಯಕ್ಕಾಗಿ ಕಂಕಣಬದ್ಧರಾದರೆಂದೂ ಹೇಳಬಹುದು.

**ಮಾಧವ—** ಇನ್ನು ಖಾದಿವಸ್ತ್ರಗಳನ್ನಂತೂ ಸಹಜವಾಗಿ ಧರಿಸಬಹುದು. ಏಕೆ ? ಮನೋರಮಾ ? ಏನೇನೂ ಸುಧಾರಣೆಯಾಗದ ಬಳೆಗಳನ್ನು ನೀನಿಷ್ಟು




ಮಾಧವರಾಯ. ಭಗೀರಥ. ಮನೋರಮೆ.

ಭಗೀರಥ:— ಸ್ವಲ್ಪ ನಿದಾನಿಸಿ, ಅತ್ತಿಗೆಯವರೆ,

ಪುಟ [೪೬.

ಅಭಿಮಾನದಿಂದ ಇಡಿಸಿಕೊಳ್ಳುತ್ತಿರುವಾಗ್ಗೆ ಎಷ್ಟೋ ಸುಧಾರಿಸಿದ ಖಾದಿಯನ್ನು ಸಹಜವಾಗಿ ಉಟ್ಟುಕೊಳ್ಳಬಹುದಲ್ಲವೇ ? (ಮನೋರಮೆ ತಲೆಹಾಕುವಳು)

**ಭಗೀ**— ಓಹೋ ? ಅಡ್ಡಿಯೇನು ? ಅವರದಕ್ಕಾಗಲೇ ಒಪ್ಪಿಕೊಂಡಿದ್ದಾರೆ.

**ಮಾಧವ**— ಹಾಗಾದರೆ ಅವಳು ಬೇಡುವಂಥ ಖಾದಿಗಳನ್ನು ಕಾರ್ಯಾಲಯದಿಂದ ಕಳುಹಿಸಿ ಕೊಡಿರಿ. ಅಹಹಾ !! ಈ ಹತ್ತಾರು ತಿಂಗಳುಗಳಲ್ಲಿ ಇವತ್ತಿನಷ್ಟು ಆನಂದವು ನನಗೆಂದೂ ಆಗಿದ್ದಿಲ್ಲ.

**ಭಗೀ**— ಅಥವಾ, ಅತ್ತಿಗೆಯವರನ್ನೇ ಜತೆಯಲ್ಲಿ ಕರೆದುಕೊಂಡುಹೋಗಿ ತೋರಿಸುವೆನು. ಅವರು ತಮ್ಮ ಮನಬಯಿಸಿದವುಗಳನ್ನು ತಕ್ಕೊಳ್ಳಲಿ. ಏಕೆ ? ಅತ್ತಿಗೆಯವರೇ ? ನನ್ನ ಹೇಳಿಕೆಯು ಸರಿಯಷ್ಟೇ ?

**ಮನೋ**— ಅಹುದು. ಅದೇ ಒಳಿತು.

**ಮಾಧವ**— ಹಾಗಾದರೆ ಶುಭಸ್ಯ ಶೀಘ್ರಂ. ಈಗಲೇ ಈ ಕೆಲಸವಾಗಲಿ. ಭಗೀರಥಭಟ್ಟರೇ, ಪವಿತ್ರವಾದ ಖಾದೀವಸನಧಾರಿಣಿಯಾದ ಮನೋರಮೆಯನ್ನು ಯಾವಾಗ ನೋಡೇನೋ ಎನ್ನುವ ಹಾಗಾಗಿದೆ. (ಹೋಗುವನು)

**ಭಗೀರ**— ಹಾಗಾದರೆ ಹೋಗಿಬರುವ ನಡೆಯಿರಿ. ಅತ್ತಿಗೆಯವರೇ ! (ತುಸು ಮುಂದೆ ಬಂದು)

**ಮನೋ** — ಮಾಯ ಡೀಯರ್, ಎಂತಹ ಪ್ರಮಾದದ ಸಮಯವು. ನಾನು ನಿನ್ನ ಹಾದಿಯನ್ನು ನೋಡುವದಕ್ಕೆ ಹಿತ್ತಲ ಪಡಸಾಲೆಯಲ್ಲಿ ಬರುವಾಗ್ಗೆ ನಡುಮನೆಯ ಬಾಕಿಲಕ್ಕೆ ಒಳಚಿಲಕವನ್ನಿಕ್ಕಿಕೊಂಡು ಬಂದಿರಲಿಲ್ಲ! ಅಂತೇ ರಾಯರು ಪಕ್ಕನೇ ಬಂದು ಬಿಟ್ಟರು.

**ಭಗೀ**— ಇನ್ನೂ ನಮ್ಮ ಸುದೈವ. ಸ್ವಲ್ಪ ತಡೆದು ಬಂದಿದ್ದರೆ ಅವರ ಕಣ್ಣುಗಳು ಮತ್ತಾವ ಅನರ್ಥವಾದ ದೃಶ್ಯವನ್ನು ನೋಡುತ್ತಿದ್ದವೋ ಏನೋ ?

**ಮನೋ**— (ಅವನ ಕೈಯನ್ನು ತನ್ನ ಎದೆಗೆ ಹಚ್ಚಿಕೊಂಡು) ನೋಡಿದಿಯಾ ಎದೆಯು ಹೇಗೆ ಧಡಧಡಾ ಬಡಿದುಕೊಳ್ಳುತ್ತಿರುವದು.

**ಭಗೀರ**— ಆದರೆ, ನನ್ನ ಸಮಯಸೂಚಕತೆ ಎಂಥಾದ್ದು !!

**ಮನೋ—** ಪ್ರಿಯಾ ಭಗೀರಥಾ ! ಏನು ನಿನ್ನ ಅದ್ಭುತವಾದ ಪ್ರಸಂಗಾವಧಾನವೋ !

**ಭಗೀ —** ನೋಡು. ದೇಶೀ ಬಳಿಗಳು ಹೇಗೆ ನಮ್ಮ ಮರ್ಯಾದೆಯನ್ನುಳಿಸಿದವು ! ನಿನ್ನ ತಗಾದೆಯಂತೆ ಅಪ್‌ಟುಡೇಟ ವೇಷದಲ್ಲಿದ್ದರೆ ಈ ಟ್ರಿಕ್ ಸಾಧಿಸುತ್ತಿತ್ತೆ? ಆದದರಿಂದ ನೀನು ಸಹ ನನ್ನಂತೆಯೇ ಖಾದಿಯ ವೇಷವನ್ನು ಮೊದಲು ಹಾಕು !!

**ಮನೋ—** ಆ ಮೇಲೆ ನಮ್ಮ ನಡಾವಳಿಗಳನ್ನು ಜನರು ಅಷ್ಟು ಚಿಕಿತ್ಸಕ ದೃಷ್ಟಿಯಿಂದ ನೋಡರು. ಹುಂ, ನಡೆ ಶೀಘ್ರ; ಖಾದೀ ಕಾರ್ಯಾಲಯಕ್ಕೆ ಹೋಗುವಾ.

**ಭಗೀ —** ಭಂಡಾಟಕ್ಕೆ ಗೌರವದ ಬಣ್ಣವನ್ನು ಕೊಡುವದಕ್ಕಾಗಿ ಸಹ ಈ ದೇಶಭಕ್ತರ ವೇಷವು ಹೇಗೆ ಉತ್ತಮವಾದ ಸಾಧನೆಯಿರುವದೋ ಹಾಗೆಯೇ ಪ್ರತಿಯೊಂದು ವ್ಯವಹಾರದಲ್ಲಿ ವಿಶೇಷ ಲಾಭವನ್ನು ಪಡೆಯುವದಕ್ಕೂ ಸಾಧನವಾಗಿದೆ.

**ಮನೋ—** ಅಹುದಹುದು ! ಈಗ್ಗೆ ನನಗೆ ಹೊಳೆಯಿತು. ಅಂತೇ ಇಚೀಚಿಗೆ ಎಲ್ಲ ವ್ಯವಹಾರದವರೂ ಈ ವೇಷವನ್ನು ಹಾಕಿದ್ದಾರೆ !

**ಭಗೀರ—** ಇಲ್ಲವೇನು ಮತ್ತೆ ?

**ಮನೋ—** ನಡೆ ನಡೆ ಶೀಘ್ರ ! ಉತ್ತಮೋತ್ತಮ ಕೈನೂಲಿನ ಬಟ್ಟೆಗಳನ್ನು ಕೊಂಡುಕೊಳ್ಳುವಾ !!

(ಹೋಗುವರು. ಮತ್ತೊಂದು ಬದಿಯಿಂದ ಕಮಲೆಯು ಕುಮಾರನನ್ನು ಅಚ್ಛೆಯಿಂದ ಜಗ್ಗಿ ತರುವಂತೆ)

**ಕಮಲಾ—** ನಡಿಯೋ ಶೀಘ್ರ ! ನನ್ನ ಹೊಟ್ಟೆಯು ಬಹು ಹಸಿದಿದೆ.

**ಕುಮಾರ—** ನಿನಗೆ ಊಟ ಮಾಡಲಿಕ್ಕೆ ಯಾರು ಬೇಡವೆನ್ನುವರು ? ನಾನು ಬರುವತನಕ-ನಿನ್ನ ಗಂಟಲದಲ್ಲಿ ತುತ್ತು ಇಳಿಯುವದಿಲ್ಲವೇನು?

**ಕಮಲಾ—** ಅದೆಲ್ಲ ರಗಳೆಯನ್ನು ಹಚ್ಚಬೇಡಾ. ಮೊದಲು ನಡೆ. ಅದೋ ತಡವಾಯಿತೆಂದು ಅಮ್ಮನು ಸಹ ನಿನ್ನನ್ನು ಕರೆಯಲು ಹೊರಟಿದ್ದಾಳೆ.

## ೩ನೆಯ ಅಂಕ

**ರಮಾ**— ಕುಮಾರಾ, ಏನು ಹೀಗೆ ತಡಮಾಡಿದರೆ? ಊಟಮಾಡಿದ ಮೇಲೆ ಬೇಕಾದಷ್ಟು ಕೆಲಸ ಮಾಡಬಹುದು.

**ಕುಮಾರ**— ಅಮ್ಮಾ, ಜಹಾಗೀರದಾರ ಮನೋರಮಾಬಾಯಿಯಂಥವರು ಖಾದೀ ವಸ್ತ್ರಗಳನ್ನುಡಲಿಕ್ಕೆ ಹತ್ತಿದ್ದಾರೆ. ಅದರಿಂದ ನಮಗೆ ಉತ್ತಮೋತ್ತಮ ವಸ್ತ್ರಗಳನ್ನು ಹುಟ್ಟಿಸುವದಕ್ಕೆ ಬಹು ಉಮೇದಿಯು ಬಂದಿದೆ. ಇಂದೇ ಮಗ್ಗದ ಮೇಲೆ ಬಹು ದಿವ್ಯವಾದ ಸೀರೆಯನ್ನು ಹಾಕಿರುವೆನು. ಅದನ್ನು ನೋಡಿ ಆಚಾರ್ಯಮಾವನು ಬಹು ಸಂತೋಷಬಟ್ಟನು.

**ರಮಾ**— (ಸ್ವಗತ) ಅಹಹ! ಇವನು ನನ್ನ ನಿಜವಾದ ಶಾರದೆಯ ಮಗನಾಗಿದ್ದರೆ ಪದ್ಮನಾಭನು ಇನ್ನೂ ಸಂತೋಷಬಡುತ್ತಿದ್ದನು. (ಪ್ರಕಾಶ) ಅಹುದೋ! ಸಂತೋಷಪಟ್ಟ ಮಾವನು ನಿನಗೆ ಇನಾಮೇನು ಕೊಟ್ಟನು?

**ಕುಮಾರ**— ಭಾಪು! ಕುಮಾರನೆಂದು ಬೆನ್ನುಚಪ್ಪರಿಸಿದ. ಸಾಕು ನನುಗೇನು? ಪದ್ಮನಾಭ ಮಾವನಂಥ ದೊಡ್ಡ ಮನುಷ್ಯನು ಸೈಯೆಂದರೆ ಸಾಕು. ಅದೇ ನಮಗೊಂದು ದೊಡ್ಡ ಇನಾಮು.

**ರಮಾ**— ಜಗಕ್ಕೆ ದೊಡ್ಡವರಾದ ಅಪ್ಪಾಜಿಯವರಿಂದ ನೀನೆಷ್ಟೋ ಸಾರೆ ಸೈಯೆನಿಸಿಕೊಂಡಿರಬಹುದಲ್ಲವೆ?

**ಕಮಲಾ**— ಏ ಕುಮಾರಾ, ನಾನು ದಿವ್ಯವಾದ ನೂಲು ತೆಗೆದು ಕೊಡದಿದ್ದರೆ ನಿನ್ನಿಂದ ನಯವಾದ ವಸ್ತ್ರಗಳನ್ನು ನೇಯುವದಾಗುತ್ತಿತ್ತೆ? ನೇಯಿ ನೋಡುವಾ, ಉರುಟು ನೂಲು ತೆಗೆದುಕೊಂಡು ಈಗ್ಗೆ ಮಗ್ಗದ ಮೇಲೆ ಹಾಕಿದಂಥ ಸೀರೆಯನ್ನು!

**ಕುಮಾರ**— ಅಮ್ಮಾ ಇವಳು ಜಗಳಗಂಟಿ! ತಾನು ನೂಲು ತೆಗೆದು ಕೊಟ್ಟಳಂತೆ! ಅಂತಹ ನಯವಾದ ಸೀರೆಗಾಗಿ ನೂಲುತೆಗೆಯುವದು ನಿನ್ನ ಯೋಗ್ಯತೆಯೆ? ಅದು ಮಾತಾ ತೆಗೆದ ನೂಲು. ಬೇಕಾದರೆ ಆಕೆಯನ್ನು ಕೇಳಿಸಿಕೊಡಲೊ?



೪—೩೧೪೭

**ಕಮಲಾ**— ನನ್ನ ಸೂಲಿಗೆ ಮಾತಾ ತೆಗೆದ ನೂಲೆಂದು ಹೇಳುವನು; ತುಂಟ ! ನಾನು ನಿನ್ನಗೂಡ ಮಾತಾಡುವದಿಲ್ಲ ಹೋಗು !

**ಕುಮಾರ**— (ಅವಳನ್ನು ರಮಿಸುತ್ತ) ಏ! ಏ: ಹಾಗೆ ಮಾಡಬೇಡ ಕಮಲಾ !!

**ಕಮಲಾ**— (ಸಿಟ್ಟಿನಿಂದ) ಹೋಗು ನನ್ನನ್ನು ಮುಟ್ಟಬೇಡಾ ! ಮತ್ತು ಮಾತಾಡಿಸಬೇಡಾ !!

**ಶಾರದಾ**— ಇದೇನು ಕಮಲಾ, ಕುಮಾರನ ಸಂಗಡ ನಾನ್ ಕೋ ಆಪರೇಷನ್ ಹೂಡಿದೆ? ಹೀಗೆ ಅವನನ್ನು ಹಣ್ಣಿಗೆ ತಂದು ಸ್ವರಾಜ್ಯವನ್ನು ಸಂಪಾದಿಸುವ ವಿಚಾರವಿರುವದೇನು ?

**ಕುಮಾರ** — ಮಾತಾ, ನನ್ನದಾಗಿರುವ ಎಲ್ಲಾ ರಾಜ್ಯವನ್ನು ನಾನು ಕೊಟ್ಟು ಬಿಡುವೆನು. ನೀವೀರ್ವರೂ ಸೇರಿ ನಮ್ಮ ಅವಳಲ್ಲಿ ಒಪ್ಪಂದಮಾಡಿಸಿರಿ ?

**ರಮಾ** — ನೋಡೆ, ಅವನು ತನ್ನ ರಾಜ್ಯವನ್ನೆಲ್ಲಾ ಕೊಡುವನಂತೆ ! ಒಪ್ಪಂದವನ್ನು ಮಾಡಿಕೊಂಡು ಅವನ ರಾಜ್ಯಕ್ಕೆ ರಾಣಿಯಾಗೆ.

**ಕುಮಾರ** — ಅಗಲಿ ! ನಿಮ್ಮ ಒಪ್ಪಂದದ ಕಲಮುಗಳನ್ನು ನಾನು ಮಾನ್ಯ ಮಾಡುವೆನು. ನನ್ನ ಮತ್ತು ಕಮಲೆಯಲ್ಲಿ ಕೋ-ಆಪರೇಷನ್ ಉಂಟಾ ದರೆ ಸಾಕು !

**ಶಾರದೆ**— ಹೇಗೆ ಕಮಲಾ ಒಪ್ಪಿಗೆ ಇಲ್ಲವೆ ?

**ಕಮಲಾ**— ನನಗೇನೂ ತಿಳಿಯೋದಿಲ್ಲ. (ಓಡುವಳು)

**ರಮಾ** — ನಡೆ ಮಾತಾ. ಮೈತೊಳೆದುಕೊ. ಊಟವನ್ನು ಮಾಡು. ಹೊತ್ತಾಗಲಿಲ್ಲವೆ ? ಖಾದೀ ಕಾರ್ಯಾಲಯದಿಂದ ಪದ್ಮನಾಭನು ಇಷ್ಟರಲ್ಲಿಯೇ ಬರಬಹುದು. ನಡೆಯಿರಿ. (ಹೋಗುವರು. ಮತ್ತೊಂದು ಬದಿಯಿಂದ)

**ನಾಗಾಭಟ್ಟ**— ನಿಮಗೆ ಹೇಗೆ ಸಹನವಾಗುವದೋ ಕಾಣೆ ! ಮನೆಯೆಲ್ಲ ಹೊಲೆಮಯವಾದರೇನು ಸ್ವಾಮಿ ! ಇವರಿಗೆ ಪ್ರಾಯಶ್ಚಿತ್ತವನ್ನೆಷ್ಟೆಂದು ಕೊಡಬೇಕು ?

**ಹಿರಣ್ಯ**— ಇದೇನು ನಾಗಾಭಟ್ಟರೆ. ಅಂದು ನೀವು ಅಸ್ಪೃಶ್ಯತಾನಿವಾರಣೆಯ ವಿಷಯವಾಗಿ ಅಪ್ಪಾಜೀ ಮಹಾತ್ಮರು ಹೇಳಿದಾಗ್ಗೆ ವಿಹಿತವಾದ ವಿಚಾರವೆಂದು ಒಪ್ಪಿಕೊಂಡಿದ್ದಿರಿ. ಈಗ್ಗೆ ನಿಮ್ಮ ವಿಚಾರಗಳು ಮತ್ತೆ ಮೂಲರೂಪಕ್ಕೆ ಬಂದಂತೆ ಕಾಣುವವು?

**ನಾಗಾಭಟ್ಟ**— ಸ್ವಾಮೀ, ಹಿರಣ್ಯಗರ್ಭಾಚಾರ್ಯರೆ, ತತ್ವಕ್ಕೆ ಒಪ್ಪಿಕೊಳ್ಳಬಹುದು ಅಷ್ಟೆ. ಅದರಂತೆ ಆಚರಿಸುವದೆಂದರೇನು ಸ್ವಾಮಿ?

**ಹಿರಣ್ಯ**— ಒಪ್ಪಿಕೊಂಡ ಮೇಲೆ ಆಚರಿಸಲೇಬೇಕು.

**ನಾಗಾಭಟ್ಟ**— ಹಾಗಾದರೆ ನೀವು ಅಸ್ಪೃಶ್ಯರನ್ನು ನಿರಾಂತಕವಾಗಿ ಮುಟ್ಟುವಿರನ್ನಿ?

**ಹಿರಣ್ಯ**— ಅನುಮಾನಪಡಬಹುದೇ! ನಮ್ಮ ಪದ್ಮನ ಖಾದೀಕಾರ್ಯಾಲಯದ ಕೆಲಸಗಾರರಲ್ಲನೇಕ ಜನರು ಅಸ್ಪೃಶ್ಯರೇ ಇದ್ದಾರೆ.

**ನಾಗಾಭಟ್ಟ**— ತಾಳಿ! ತಾಳಿ!! ಸ್ವಲ್ಪ ದಿನಗಳಲ್ಲಿ ನಿಮ್ಮ ಸ್ವಾಮಿಗಳು ಬರುವರಂತೆ. ಆಗ್ಗೆ ನಿಮ್ಮ ಬಣ್ಣ ತಿಳಿಯುವದು.

**ಹಿರಣ್ಯ**— ಏನಾಗುವದು? ಏನು ಬಹಿಷ್ಕಾರಹಾಕುವರೆನ್ನುವಿರಾ? ಛೀ! ಹಾಗೆ ಯಾವ ಮಠದ ಗುರುಗಳೂ ಈ ವರೆಗೂ ಮಾಡಿಲ್ಲ. ಹಾಗವರು ಮಾಡಿದ್ದರೆ ತಮ್ಮ ಶಿಷ್ಯರಲ್ಲಿ ೧೧ ಆಣೆ ಶಿಷ್ಯರನ್ನು ಕಳೆದುಕೊಳ್ಳುತ್ತಿದ್ದರು. ಅವರಾದರೂ ಕಾಲಮಾನಾನುಸಾರವಾಗಿಯೇ ನಡೆಯುವರು!

**ನಾಗಾಭಟ್ಟ**— ಇದೇನೋ ಸ್ವಾಮಿ, ಸುಣ್ಣಾನುಂಗಿದಂತಾಗುವದು.

**ಅಸ್ಪೃಶ್ಯಪ್ರೋರ**— (ಹಿರಣ್ಯಗರ್ಭಾಚಾರ್ಯರ ಕೈಯಲ್ಲಿ ಹಂಜೀಪುಡಿಕೆಯನ್ನು ಕೊಟ್ಟು) ಬುದ್ಧಿ, ಈ ಹಂಜಿಯು ಒಪ್ಪವಾದ ನೂಲು ತೆಗೆಯಲಿಕ್ಕೆ ಬಹು ಉತ್ತಮವಿದೆಯಂತೆ. ತಮಗೆ ಕೊಡುವದಕ್ಕಾಗಿ ಆಚಾರ್ಯರು ಹೇಳಿದ್ದಾರೆ.

**ನಾಗಾ**— ಎಲಾ, ನೀನು ಮುಚ್ಚಿಗಾರ ಹನುಮನ ಮಗನಲ್ಲವೇನೊ?

**ಅ. ಪ್ರೋ**— ಅಹುದು ಬುದ್ಧಿ.

**ನಾಗಾ**— ಆಚಾರ್ಯರೆ, ನೀವು ಒಳ್ಳೆ ಎದೆಗಾರರು. ಮಾಡುವಾಗ್ಗೆ ಅತಿಶಯವಾಗಿ ಮಡಿ ಮಾಡುವಿರಿ. ಬಿಟ್ಟರೆ ಅತಿಶಯವಾಗಿ ಬಿಡುವಿರಿ.

**ಹಿರಣ್ಯ—** ಇದೊಂದು ನಮ್ಮ ವೈಶಿಷ್ಟ್ಯವೆಂದು ಹೇಳಿ. ಅದಕ್ಕೇನು ! ಅದಿರಲಿ ನಾಗಾಭಟ್ಟರೆ– ನಿಮ್ಮ ಭಗೀರಥನ ಸಲುವಾಗಿ ಹೇಗೆ ಮಾಡುವಿರಿ? ಅವನು ಖಾದೀಕಾರ್ಯಾಲಯುದ ಕಾರ್ಯದರ್ಶಿಯಲ್ಲವೆ ?

**ನಾಗಾ—** ಏನೋ ಹೋಗಿ ಸ್ವಾಮಿ ! ಈಗಿನ ಮನ್ವಂತರವನ್ನು ನೋಡಿ ನಾನಂತೂ ದಿಕ್ಕುತಪ್ಪಿದವನಾಗಿದ್ದೇನೆ. ದೇಶವೆಲ್ಲಾ ಒಂದೇ ಮಾರ್ಗವನ್ನೇ ಹಿಡಿದುಬಿಟ್ಟಿದೆ !

**ಹಿರಣ್ಯ—** ಹಾಗೆ ದೇಶವೆಲ್ಲವೂ ಯಾವ ಮಾರ್ಗವಾಗಿ ನಡೆಯುವದೋ ತದ್ವಿರುದ್ಧವಾಗಿ ತಿಳಿದವರು ಹೋಗುವದೊಳಿತೆ ? " ಮಹಾಜನೋ ಯೇನ ಗತಸ್ಸ ಪಂಥಾ " ಎಂದು ಹೇಳಿದೆಯಷ್ಟೆ ?

**ನಾಗಾ—** ಅಂತೂ ಹಿರಣ್ಯಗರ್ಭಾಚಾರ್ಯರೇ, ಮುಪ್ಪಿನವರಾದ ನಿಮಗೆ ಸಹ ಈ ಚಳವಳಿಗಾರರ ಗಾಳಿಯು ತಗಲಿತನ್ನಿ !

**ಹಿರಣ್ಯ—** ನಮಗೊಬ್ಬರಿಗೇಕೆ ? ತಮ್ಮನ್ನೇನದು ಬಿಡುವದೆಂದು ತಿಳಿಯುವಿರೊ ? ಮನೆಮಂದಿಯೆಲ್ಲಾ ಅದರಲ್ಲಿ ಸೇರಿಬಿಟ್ಟ ಮೇಲೆ ತಾವೇನು ಮಾಡುವಿರಿ ? ಮನೆಯಲ್ಲಿರುವದಾದರೆ ಅದರಲ್ಲಿ ಸೇರಬೇಕು. ಅದು ಬೇಡವಾದರೆ ಸರ್ವಸಂಗಪರಿತ್ಯಾಗಮಾಡಿ ಹಿಮಾಲಯಪರ್ವತ ಸೇರಬೇಕು.

**ನಾಗಾ—** ಅದಾಯಿತು ಅಚಾರ್ಯರೇ ! ಊರಲ್ಲಿ ಒಂದು ಹೊಸ ಸುದ್ದಿಯು ಎದ್ದುಬಿಟ್ಟಿದೆಯಲ್ಲಾ !

**ಹಿರಣ್ಯ—** ಅದೇನು ಮತ್ತೆ ?

**ನಾಗಾ—** ತಾವು ತಮ್ಮ ಮೊಮ್ಮಗಳಾದ ಕಮಲೆಯನ್ನು ಆ ಆಶ್ರಮದಿಂದ ಬಂದ ಮಾತಾಬಾಯಿಯ ಮಗನಾದ ಕುಮಾರನಿಗೆ ಕೊಡುವಿರಂತೆ! ಅಹುದೊ ?

**ಹಿರಣ್ಯ—** ನಾನೇನು ಇನ್ನೂ ಆ ಸಂಬಂಧಕ್ಕೆ ಸಂಪೂರ್ಣ ಒಪ್ಪಿಗೆಯನ್ನು ಕೊಟ್ಟಿಲ್ಲ......

**ನಾಗಾ—** ಅಂತೂ ಕೊಡುವಿರಿ ?

**ಹಿರಣ್ಯ**— ಅದನ್ನೀಗಲೆ ಹೇಳಲಾರೆ !

**ನಾಗಾ**— ಸ್ವಾಮಿ, ಆ ಸಂಬಂಧವನ್ನು ನಾನಾವ ಕಾಲಕ್ಕೂ ಕಲೆಯಗೊಡ ಲಿಕ್ಕಿಲ್ಲ. ನೋಡಿ, ಈಗಲೇ ಹೇಳಿಬಿಟ್ಟಿದ್ದೇನೆ. ಮುಂದೆ ನಮ್ಮ ನಿಮ್ಮಲ್ಲಿ ರಸ ಕಸಿಯುಂಟಾಗಬಾರದು. ಕಮಲೆಯು ತಮಗೆ ಮಗನ ಮಗಳಾದರೆ ನನ್ನ ಮಗಳ ಮಗಳಾಗಿದ್ದಾಳೆ. ಅವಳ ಮೇಲೆ ತಮ್ಮದೆಷ್ಟು ಸತ್ತೆಯೋ ಅಷ್ಟು ನನ್ನ ದಾದರೂ ಇದೆ. ಮೊದಲು ನಾನು ತಮ್ಮ ಬಾಂಧವ್ಯವನ್ನು ಮಾಡಿದ್ದು ನಿಮ್ಮ ಮಗನ ಮುಖವನ್ನು ನೋಡಿಯಲ್ಲಾ. ಏನೋ ತಾವು ಶಿಷ್ಟರೂ ಸಂಭಾವಿತರೂ ಅಲ್ಲದೆ ನಮ್ಮ ಬಾಲಮಿತ್ರರೆಂಬು ಮಾಡಿದ್ದೇನೆ.

**ಪದ್ಮ**— ಏನು ಏನು, ಮಾವಂದಿರೇ, ಒಳ್ಳೇ ಫೋರ್ಸಿನಲ್ಲಿ ಬಂದು ಬಿಟ್ಟಿರು ವಿರಿ ? ಅಪ್ಪಾ, ಏನು ಸಮಾಚಾರ, ತಮ್ಮ ಮತ್ತು ಮಾವಂದಿರ ಮಿತ್ರತ್ವವು ಕೇವಲ ಆದರ್ಶವಾದದ್ದಲ್ಲವೆ ? ಹೀಗಿರಲು ಇಲ್ಲಾರು ಭೇದನೀತಿಯ ಮರಿಯನ್ನು ಬಿಟ್ಟರು ?

**ಹಿರಣ್ಯ**— ಇದೊ, ಎಲ್ಲರೂ ಸೇರಿ ಕಮಲೆಯನ್ನು ಕುಮಾರನಿಗೆ ಕೊಡುವ ಆಲೋಚನೆಯನ್ನು ಮಾಡಿರುವಿರಲ್ಲಾ, ಅದಕ್ಕಾಗಿ ಇವರಿಷ್ಟು ರೇಗಿಬಿಟ್ಟಿದ್ದಾರೆ.

**ಪದ್ಮ**— ಮಾವಂದಿರೇ, ಆ ವಿಷಯದಲ್ಲಿ ತಂದೆ ಮಕ್ಕಳಾದ ನಾವು ಕೇವಲ ನಿರ್ದೋಷಿಗಳು. ನಮ್ಮ ಮೇಲೆ ತಾವು ಸಿಟ್ಟಾಗಬೇಡಿ. ಹೆಂಗಸರೆಲ್ಲಾ ಸೇರಿ ತಮ್ಮ ರೌಂಡ ಟೇಬಲ್ ಕಾನ್ಫರನ್ಸಿನಲ್ಲಿ ಆ ಗೊತ್ತುವಳಿಯನ್ನು ಪಾಸುಮಾಡಿ ಕೊಂಡಮೇಲೆ ನಮಗದನ್ನು ತಿಳುಹಿಸಿದ್ದಾರೆ.

**ನಾಗಾ**— ನನ್ನ ಮಗಳು ಇದಕ್ಕೆಂದೂ ಒಪ್ಪತಕ್ಕವಳಲ್ಲಾ !

**ಪದ್ಮ**— ಅಷ್ಟೇಕೆ ತೊಂದರೆ ? ಅವಳನ್ನೇ ಕರೆದು ಕೇಳಿದರಾಯಿತು. ರಾಧಾ! ರಾಧಾ ! ಹೀಗೆ ಬಾ. ಮಾವನು ಕರೆಯುತ್ತಾನೆ.

**ನಾಗಾ**— (ಸ್ವಗತ) ಈ ಇಸಮುಗಳು ಒಳ್ಳೇ ತೈಯ್ಯಾರಾಗಿವೆ ! ನಿರ್ಭಯ ವಾಗಿ ಹೆಂಡತಿಯನ್ನು ಹೆಸರುಗೊಂಡೇ ಕರೆಯುವನಲ್ಲಾ !

**ಪದ್ಮ**— ರಾಧಾ ! ಬಾ. ಎಂಬು ಹೇಳಿದೆನಲ್ಲವೇ ? (ಕಮಲಾ ಓಡಿಬರುವಳು)

**ಕಮಲಾ—** (ನೂಲುವಹಂಜೀ ಸಮೇತಳಾಗಿ) ಅಪ್ಪ ಅಪ್ಪನನ್ನು ಕರೆದಿಯಾ! ಹಿತ್ತಲದಲ್ಲಿ ಅಮ್ಮಾ ಅವ್ವಾ ಇಬ್ಬರೂ ಸೇರಿ ನೀರು ಸೇದುತ್ತಲಿದ್ದಾರೆ.

**ಪದ್ಮ —** ನನಗೇನವರ ಅಗತ್ಯವಿಲ್ಲ. ನಿಮ್ಮಜ್ಜಯ್ಯನು ಕರೆದಿದ್ದಾನೆ.

**ಕಮಲಾ—** ಏನು? ನಾಗಜ್ಜನೇ?

**ನಾಗಾ—** (ಆಕ್ಕಸದಿಂದ) ಅಹುದು ನಾಗಜ್ಜನೇ; ಕರೆ ಅವರನ್ನು ಹೀಗೆ.

**ಕಮಲಾ—** ಆಗಲಿ ಕರೆದುಕೊಂಡು ಬರುವೆನು. ಅಜ್ಜ ಕಣ್ಣುಗಳು ಕೆಂಪಾಗಿವೆ. ಕಣ್ಣುಬೇನೆ ಬಂದಿರುವದೇನು?

**ನಾಗಾ—** ಸುಮ್ಮನೇ ಹೋಗಿ ಕರೆದುಕೊಂಡು ಬರಬಾರದೇ? ಹರಟೆಗೂಳಿ! (ಹೋಗುವಳು) ಹಿರಣ್ಯಗರ್ಭಾಚಾರ್ಯರೇ ಇಷ್ಟು ದೊಡ್ಡವಳಾಗುವತನಕ ಇವಳ ಲಗ್ನವನ್ನು ಮಾಡದೇ ಬಿಟ್ಟಿದ್ದೇ ನಿಮ್ಮ ದೊಡ್ಡ ತಪ್ಪು. ಬೆಕ್ಕಿನ ಮರಿ ಬಾವುಗ ಮೀರಿದಂತಾಗಿದೆ.

**ಪದ್ಮ —** ಅದು ನಮ್ಮ ತಪ್ಪು ಅಲ್ಲವೇ ಅಲ್ಲ. ತಮ್ಮ ಚಿರಂಜೀವ ಭಗೀರಥನು ಒಡಂಬಟ್ಟಿದ್ದರೆ ಇವಳ ಲಗ್ನವಾಗಿ ಇಂದಿಗೆ ಮೂರು ವರುಷಗಳಾಗುತ್ತಿದ್ದವು. ಅಕ್ಕನ ಮಗಳನ್ನು ನಾನು ಮದುವೆಯಾಗುವದಿಲ್ಲವೆಂದು ಅವನು ರಾಗಮಾಡಿದ್ದಕ್ಕೇನೇ ಆ ವಿಚಾರವು ನಿಂತು ಬಿಡಲಿಲ್ಲವೇ? ತನ್ನ ತಮ್ಮನಿಗೆ ಮಗಳನ್ನು ಕೊಡಬೇಕೆಂದು ಮನದಲ್ಲಿ ಮಂಡಿಗೆಯನ್ನು ಮಾಡುತ್ತಿದ್ದ ರಾಧೆಯು ನಿರಾಶೆಯಾದದ್ದಕ್ಕೆ ಮೂರು ದಿನ ಮೂಲೆ ಹಿಡಿದು ಅಳುತ್ತ ಕುಳಿತಿಹಳಲ್ಲವೆ? ನೀವು ಸಹ ಮಗನಿಗೆ ಆ ಸಮಯಕ್ಕೆ ನಾಲ್ಕು ಮಾತುಗಳನ್ನು ಹೇಳಲಿಲ್ಲ! ಕಾಲೇಜದಲ್ಲಿದ್ದ ಮಗನ ಸಲುವಾಗಿ ಮತ್ತಾವನಾದರೋರ್ವ ವಿಪ್ರ ವರದಕ್ಷಿಣೆಯನ್ನು ಕೊಟ್ಟು ಮಗಳನ್ನು ಕೊಡುವ ಬೀಗನ ಬೇಟೆಯಾಡತಕ್ಕದ್ದಿತ್ತೋ ಏನೋ ನಿಮ್ಮ ಮನಸ್ಸಿನಲ್ಲಿ? ಯಾರಿಗೆ ಗೊತ್ತು!

( ಕಮಲಾ ರಾಧಾಬಾಯಿ ರಮಾಬಾಯಿಯುವರು ಬರುವರು )

**ರಾಧಾ—** ಏನಪ್ಪಾ, ಕರೆದಿಯಂತೆ. ಸುದ್ದಿಯೇನು?

**ನಾಗಾ** — ನೀವೆಲ್ಲರೂ ಸೇರಿ ಕಮಲೆಯನ್ನು ಆ ಮಾತಾಬಾಯಿಯ ಮಗನಾದ ಕುಮಾರನಿಗೆ ಕೊಡುವ ವಿಚಾರವನ್ನು ಮಾಡಿರುವಿರಂತೆ! ಮಕ್ಕಳು ಹೆಚ್ಚಾಗಿವೆ ಯೇನು ಹೀಗೆ ಬೀದಿ ಪೋರರ ಕೊರಳಿನಲ್ಲಿ ಕಟ್ಟುವದಕ್ಕೆ? ಅವನ ಕುಲವೇನೋ? ಗೋತ್ರವಾವದೋ? ಏನು ಹೀಗೆ ಅಸಡ್ಡ ವಿಚಾರಗಳನ್ನು ಮಾಡಿದರೆ?

**ರಮಾಬಾಯಿ** — ನಾಗಾಭಟ್ಟರೆ, ಹೀಗೇನು ಹೇಳುವಿರಿ? ಆ ಮಾತಾ ಬಾಯಿಯು ಪವಿತ್ರವಾದ ಬ್ರಾಹ್ಮಣಕುಲದವಳೆಂದು ಆ ದಿನ ಆಶ್ರಮವನ್ನು ನೋಡಹೋದಾಗ್ಯೆ ಅಪ್ಪಾಜೀ ಮಹಾತ್ಮರು ಹೇಳಿದ್ದನ್ನು ನೀವು ಮರೆತು ಬಿಟ್ಟ ರೇನು?

**ನಾಗಾ** — ನಾನೇನದನ್ನು ಮರೆತಿಲ್ಲ. ಇದ್ದಿರಬಹುದು, ಹುಟ್ಟ ಬ್ರಾಹ್ಮಣ ರಾಗಿ! ಆದರೆ ಆ ವೈಶ್ಯನಾದ ಅಪ್ಪಾಜೀ ಮಹಾತ್ಮನ ಜೊತೆಯಲ್ಲಿ ಊಟ ಉಪಚಾರಗಳಾದ ಬಳಿಕ ಇವರ ಕುಲವೆಲ್ಲ ಉಳಿಯಿತು?

**ರಾಧಾ** — ಅಪ್ಪಾ, ಆ ಮಹಾತ್ಮರು ನೋಡು, ಶುದ್ಧ ಶಾಕಾಹಾರಿಗಳಾಗಿ ದ್ದಾರೆ. ಹೋದ ಡಿಸೆಂಬರಿನಲ್ಲಿ ಆಚಾರ್ಯರ ಜೊತೆಗೆ ನಾನು ಸಹ ಕಾಂಗ್ರೆ ಸ್ಸಿಗೆ ಹೋಗಿದ್ದೆನಲ್ಲವೆ? ಕೊನೆಯ ದಿನ ಮಹಾಸಭೆಯ ಸದಸ್ಯರೆಲ್ಲರೂ ಸೇರಿ ವನಭೋಜನಮಾಡಿದರು. ಆ ಸಮಯದಲ್ಲಿ ಎರಡೇ ಎರಡು ಪಂಗಡಗಳಿದ್ದವು. ಒಂದು ಶಾಕಾಹಾರಿಗಳದು, ಮತ್ತೊಂದು ಮಾಂಸಾಹಾರಿಗಳದು. ಶಾಕಾ ಹಾರಿ ಪಂಗಡದವರೆಲ್ಲರೂ ಒಂದೆಡೆಯಲ್ಲಿಯೇ ಸೇರಿ ಮಾಡುತ್ತಿದ್ದ ಭೋಜನ ಪಂಕ್ತಿಯ ದೃಶ್ಯವು ಬಹು ಚಿತ್ತಾಕರ್ಷಕವಾಗಿದ್ದಿತು. ಸರೋಜಿನೀ ದೇವಿಯ ವರು ಮತ್ತು ಚಟ್ಟೋಪಾಧ್ಯಾಯ ಕಮಲಾಬಾಯಿಯವರು ನನ್ನ ಹತ್ತರದಲ್ಲಿಯೆ ಕುಳಿತಿದ್ದರು. ಆಚಾರ್ಯರ ಹತ್ತರ ಯಾರು ಕುಳಿತಿದ್ದರು ಕೇಳಿ!!

**ಎಲ್ಲರೂ** — ಯಾರು ಕುಳಿತಿದ್ದರು?

**ಪದ್ಮನಾಭ** — ಮಂಗಳೂರ ಕಾರ್ನಾಡ ಸದಾಶಿವರಾಯರು, ನೆಹರು ಜವಾ ಹಿರಲಾಲರು ವಲ್ಲಭಭಾಯಿ ಪಟೇಲ ಮೊದಲಾದವರೆಲ್ಲರೂ ಒಂದೇ ಪಂಙ್ತಿಯಲ್ಲಿ ದ್ದೆವು. ಅಲ್ಲಿಯ ಧರ್ಮವೆಂದರೆ ರಾಷ್ಟ್ರಧರ್ಮ! ಗೋತ್ರವೆಂದರೆ ಶಾಕಾಹಾರಿ ಗೋತ್ರ. ಹೀಗೆಯೇ ವಾಡಿಕೆಯುಂಟು.

**ಹಿರಣ್ಯ**— ಕೇಳಿದಿರಾ, ಸ್ವಾಮಿ ನಾಗಾಭಟ್ಟರೆ ? ಮುಂದೆ ? ಮುಂದೇನೂ; ಅಂದೆ !

**ಕಮಲಾ**— ನಾಗಜ್ಜಾ ! ಹಿಂದುಸ್ಥಾನೀ ಸೇವಾದಲದವರಂತೂ, ಇದಕ್ಕೂ ಮುಂದೆ ಹೋಗಿಬಿಟ್ಟಿದ್ದಾರೆ ! ಅವರು ಮನುಷ್ಯರ ಜಾತಿ ಎಲ್ಲಾ ಒಂದೇ ಎಂದು ತಿಳಿಯುತ್ತಾರಂತೆ ! ಬೇಕಾದರೆ ಸಾಣೇಕಟ್ಟೆಯ ಉಪ್ಪಿನ ಸತ್ಯಾಗ್ರಹಕ್ಕೆ ಹೋದ ವರನ್ನು ಕೇಳಿ ನೋಡು !

**ನಾಗಾಭಟ್ಟ**— ನಾನೇತಕ್ಕೆ ಕೇಳಹೋಗಲಿ ? ಬೇಕಾದರೆ ನೀವೆ ಕೇಳಿ ಕೊಳ್ಳಿರಿ. ಏನು ರಾಧಾ, ನನ್ನ ಪ್ರಶ್ನಕ್ಕೇನೆಂದು ಉತ್ತರವನ್ನಿತ್ತಂತಾಯಿತು ?

**ರಾಧಾ**— ಅಪ್ಪಾ, ನನ್ನ ಕಡೆಗೇನೂ ಇಲ್ಲಾ. ನಿಮ್ಮ ಮೊಮ್ಮಗಳೇ ಇದಕ್ಕೆ ಹೊಣೆಗಾರಳು. ಅವಳನ್ನೇ ಕೇಳಿಕೊಂಡರಾಯಿತು.

**ನಾಗಾ**— ಅಂ ! ಅದಕ್ಕೇನು ತಿಳಿಯುವದು ?

**ಕಮಲಾ** — ಇದೇನಜ್ಜಾ ? ಇದಕ್ಕೇನು ತಿಳಿಯುವದೆಂದು, ನನ್ನ ಸಲು ವಾಗಿ ನಪುಂಸಕ ಸರ್ವನಾಮ ಪ್ರಯೋಗವನ್ನು ಮಾಡಿದೆ ? ನಿನಗೆ ವೈಯ್ಯಾ ಕರಣಿಯೆಂದು ಜನರು ಹೇಳುವರಲ್ಲವೇ ?

**ಹಿರಣ್ಯ**— ತಕ್ಕೊಳ್ಳಿ, ನಾನಾಭಟ್ಟರೆ ! ಮುಂದೇನೂ ಅಂದೆ !

**ನಾಗಾ**— ಅಲಲಲ ! ಎಷ್ಟು ಬುದ್ಧಿವಂತೆಯಾಗಿರುವೆ ಕಮ್ಮೇ ? ಇನ್ನೂ ತುಟಿಯ ಮೇಲಿನ ಹಾಲು ಆರಿಲ್ಲ !

**ಕಮಲಾ**— (ಒರಿಸಿಕೊಳ್ಳುತ್ತ) ಹಾಲು ಕುಡಿದ ನಂತರದಲ್ಲಿ ಒರಿಸಿಕೊಂಡಿ ಲ್ಲವೋ ಏನೋ ?

**ನಾಗಾ**— ಕಮಲೆ, ನೀನಾ ಕುಮಾರನನ್ನು ಮದುವೆಯಾಗುವಿಯಾ ?

**ಕಮಲಾ**— ಮದುವೆಯನ್ನೇ ಮಾಡಿಕೊಳ್ಳುವದಾದರೆ ಅವನಗೂಡ ಮಾಡಿಕೊಳ್ಳುವೆನು. ಇಲ್ಲವೆ, ಅಪ್ಪಾಜಿಯುವಗ ಜತೆಯಲ್ಲಿದ್ದ ಆ ಕುಮಾರೀ ಮೀರಾ ಬೇನಳಂತೆ ಹಾಗೇ ಇರುವೆನು.

**ರಮಾಬಾಯಿ**— ನಾಗಾಭಟ್ಟರೆ, ಯಾವದಕ್ಕೆ ಸಮ್ಮತಿಯನ್ನು ಕೊಡುವಿರಿ?

**ನಾಗಾಭಟ್ಟ**— ಅಲ್ಲ, ರಮಾಬಾಯಿಯವರೇ, ವರನ ಕುಲಶೀಲಾದಿಗಳನ್ನು ನೋಡಬೇಕೋ ಬೇಡವೋ ?

**ಪದ್ಮ**— ಶೀಲವಂತೂ ಚನ್ನಾಗಿದೆ ಎಂದು ಸಕಲರೂ ಒಪ್ಪಿಕೊಳ್ಳುತ್ತಾರೆ. ಇನ್ನು ಕುಲದ ವಿಷಯವಾಗಿ ಅವರು ಬ್ರಾಹ್ಮಣರೆಂದು ಮಹಾತ್ಮರು ನಿಮ್ಮ ಮುಂದೆ ಹೇಳಿರುವರಂತಲ್ಲ! ಆಯಿತು ಮತ್ತೇನು ?

**ನಾಗಾಭಟ್ಟ**— ಹೇಳಿದರೆ ? ಆತನ ಹೇಳಿಕೆಯೆಂದರೇನು ವೇದವಾಕ್ಯವಾಗಿ ಬಿಟ್ಟಿತಲ್ಲಾ !

**ಪದ್ಮ**— ವರ್ತಮಾನಕಾಲದವರಾದ ನಾವೆಲ್ಲರೂ ಹಾಗೆ ನಂಬುತ್ತೇವೆ !

**ರಾಧಾ**— ಅಪ್ಪಾ, ನೀವಾದರೂ ಅಷ್ಟು ಹಟ ತೊಡುವದೇಕೆ ? ಕೊಟ್ಟ ಹೆಣ್ಣು ಕುಲಕ್ಕೆ ಹೊರತಾಗುವದಷ್ಟೆ ! ಅವಳ ಕೈಯಿಂದ ಊಟ ಮಾಡದಿದ್ದ ರಾಯಿತು. ಈ ವೈಷ್ಣವರಿಗೆ ನನ್ನನ್ನು ಕೊಟ್ಟ ಮೇಲೆ ನೀನಾದರೂ ನನ್ನ ಕೈಯಿಂದಲ್ಲಿ ಊಟ ಮಾಡುವಿ ?

**ನಾಗಾ**— ಅವರು ನಮ್ಮ ಕೈಯ್ಯಲ್ಲಿ ಊಟ ಮಾಡುತ್ತಿದ್ದರೆ ನಾವೂ ಮಾಡುತ್ತಿದ್ದೆವು !

**ಎಲ್ಲರೂ**— ನಾವು ನಿಮ್ಮಲ್ಲಿ ಊಟ ಮಾಡುವದಕ್ಕೆ ಸಿದ್ಧರಿದ್ದೇವೆ! ಮುಂದೆ?

**ಹಿರಣ್ಮ**— ಹೇಳಿ, ನಾಗಾಭಟ್ಟರೆ, ಮುಂದೇನೂ ಅಂದೆ !

**ಕಮಲಾ**— ಹೇಳು ನಾಗಜ್ಜಾ, ಮುಂದೇನು ? ನಮ್ಮ ಗೂಡ ಕೋಆಪರೇಷನ್ನವೋ, ಅಥವಾ ನಾನ್‌ಕೋಆಪರೇಶನ್ನವೋ? (ನಾಗಾಭಟ್ಟನು ಸುಮ್ಮನಿರುವನು) ಹಂ, ಸಾಯಿಲೆನ್ಸ ಇಜ ಹಾಫ್ ಕನ್ಸೆಂಟ ! ನಾಗಜ್ಜನು ಒಪ್ಪಿಕೊಂಡನು!

**ನಾಗಾಭಟ್ಟ**—ಏನೋ ಮಹಾರಾಯಾ ! ನೀವೆಲ್ಲಾ ತೊರೆದು ನಿಂತಿರುವಿರಿ. ನಮಗೇಕೆ ಬೇಕು ? ನಮ್ಮಷ್ಟಕ್ಕೆ ನಾವಿದ್ದರಾಯಿತು. ( ಹೋಗುವರು )

**ಪದ್ಮ**— ಅಮ್ಮಾ, ಹಿಗೇಕೆ ವೃಥಾ ಹರಟೆಯಲ್ಲಿ ವೇಳೆಗಳೆಯುವದು ? ಇಷ್ಟು ಹೊತ್ತಿಗೆ ಎಷ್ಟು ನೂಲು ತೆಗೆಯುತ್ತಿದ್ದಿರಿ ?. ಈ ತಿಂಗಳಿನ ಕೊನೆಗೆ

ನಾವು ಅಖಿಲಭಾರತ ಚರ್ಖಾಸಂಘದವರಿಗೆ ಎರಡು ಲಕ್ಷ ವಾರು ನೂಲು ಕಳು ಹಿಸುವ ಸಂಕಲ್ಪಮಾಡಿಲ್ಲವೆ ? ನಡೆಯಿರಿ. ಕಾರ್ಯದಲ್ಲಿ ತೊಡಗಿರಿ ! ಮೇಲಾಗಿ ಇವತ್ತೇ ಸಂಜೆಯ ೫॥ ಗಂಟೆಗೆ ಸುಪ್ರಸಿದ್ಧ ಖಾದೀಭಕ್ತರಾದ ಹರಡೇಕರ ಮಂಜಪ್ಪನವರ ಉಪನ್ಯಾಸವು ಜಹಾಗೀರದಾರ ಮನೋರಮಾಬಾಯಿಯವರ ಅಧ್ಯಕ್ಷತೆಯಲ್ಲಿ ಜರುಗತಕ್ಕದ್ದಿದೆ. ಆ ಸಭೆಯು ಪೂರ್ವಸಿದ್ಧತೆಗಾಗಿ ಈಗಲೆ ಹೋಗಬೇಕಾಗಿದೆ. ನಡೆಯಿರಿ. (ಸಕಲರು ಹೋಗುವರು.)

(ಗುಡಸಲಿನಲ್ಲಿ ಮಾಧವರಾಯನ ಆರೈಕೆಯನ್ನು ಶಾರದೆಯು ಮಾಡುವಂತೆ)

**ಮಾಧವ—** ಮಾತಾಬಾಯಿಯವರೆ, ನೀವೆಂತಹ ಪುಣ್ಯವಂತರು ! ಪಾಪಿ ಯಾದ ನನ್ನನ್ನು ಪಾವನ ಮಾಡಿದಿರಿ. ಯಾವ ರೋಗನಿವಾರಣೆಯ ಸಂದರ್ಭ ದಲ್ಲಿ ಧನ್ವಂತರಿಗಳ ಕೈ ನಿಂತು ಹೋಗುವವೊ ಅಂತಹ ಮಹಾರೋಗದಿಂದ ಗಲಿತವಾದ ನನ್ನ ಅವಯವಗಳು ನಿಮ್ಮಂಥವರ ಕರಸ್ಪರ್ಶದಿಂದ ಚಿಗಿತವಲ್ಲವೆ ! ಯಾವ ರೋಗಿಯನ್ನು ಅಸ್ಪೃಶ್ಯರೆನಿಸಿಕೊಳ್ಳುವವರು ಸಹಾ ಮುಟ್ಟುವದಿಲ್ಲವೊ, ಯಾವ ರೋಗಿಯನ್ನು ಅವನ ಆಪ್ತ ಇಷ್ಟ ಬಂಧುಬಳಗವೂ ಸಹ ದೂರ ಮಾಡು ವದೊ ಅಂಥ ಮಹಾರೋಗಿಯಾದ ನನ್ನನ್ನು ನಿರ್ಭಯವಾಗಿ ಮುಟ್ಟಿಕೊಂಡು ಉಪಚರಿಸಿದಿರಲ್ಲವೆ ! ನಿಮ್ಮ ಉಪಕಾರವನ್ನು ನಾನು ಹೇಗೆ ತೀರಿಸಲಿ !

**ಶಾರದಾ—** ರಾಯರೆ, ಮನುಷ್ಯನಿಗೆ ಸಹಾಯ ಮಾಡುವದು ಮನುಷ್ಯನ ಕರ್ತವ್ಯವು. ನೋಡಿ, ಅದರಲ್ಲಿಯೂ ಅಂಥ ಪಂಗು ರೋಗಗ್ರಸ್ತರಾದವರಿ ಗಂತೂ ಮೊದಲು ನೆರವಾಗಬೇಕು. ಅದೇನೇ ಇರಲಿ; ಅಪ್ಪಾಜಿಯವರ ಹೇಳಿಕೆಯಂತೆ ನಿಮ್ಮ ಸ್ವಾರ್ಥತ್ಯಾಗವೇ ಈ ನಿಮ್ಮ ಮಹಾರೋಗಕ್ಕೆ ತಾರಕ ವಾದ ಔಷಧವಾಯಿತು !

**ಮಾಧವ—** ಬಾಯಿ, ನಾನು ಮಾಡಿದ ಸ್ವಾರ್ಥತ್ಯಾಗವೇನು? ಬಾಯಿಯ ವರೇ, ದಾಸ ನೆಹರು ಲಾಲಾಜೀ ಪ್ರಭೃತಿಗಳು ಮಾಡಿದಂಥ ದೇಶಾಭಿಮಾನ ಪೂರ್ಣವಾದ ಸ್ವಾರ್ಥತ್ಯಾಗವೆ ? ಮಹಾರೋಗಗ್ರಸ್ತನಾಗಿ ಭೋಗಗಳನ್ನು ಭೋಗಿಸಲಿಕ್ಕೆ ಅಸಮರ್ಥನಾಗಿ ಮಾಡಿದ ಅಧಮ ತರಗತಿಯ ತ್ಯಾಗವಾಗಿದೆ. ಇದನ್ನಪ್ಪಾಜಿಯವರೇನೆಂದು ಹೊಗಳಿದರೊ ಕಾಣೆ !

**ಶಾರದಾ** — ಯಾವ ಸ್ಥಿತಿಯಲ್ಲಿ ಮಾಡಿದ ದಾನವೇ ಆಗಲಿ, ಅದು ದರಿದ್ರ ನಾರಾಯಣನ ಸೇವೆಗೇ ಮುಟ್ಟುತ್ತಲ್ಲವೆ ?

**ಮಾಧವ**— ಬಾಯಿ, ತಮ್ಮಂಥ ಪುಣ್ಯಶಾಲಿಗಳ ನೆಳಲು ಬಿದ್ದದ್ದಕ್ಕೆ ಹೇಗೆ ನಾನು ಈ ತರಹದ ಮಹಾರೋಗದಿಂದ ಮುಕ್ತನಾದೆನೊ, ಹಾಗೆ ಮನಕ್ಕೆ ತಗಲಿದ ಮಹಾರೋಗದಿಂದ ಸಹ ಮುಕ್ತನಾಗಿದ್ದೇನೆ.

**ಶಾರದಾ**— ಏನು ? ತಮಗೆ ಮನೋರೋಗವು ತಗಲಿಕೊಂಡಿತ್ತೆ ?

**ಮಾಧವ**— ಈ ತನುರೋಗಕ್ಕಿಂತಲೂ ಆ ಮನೋರೋಗವು ಹೆಚ್ಚಿನದಿತ್ತು. ಬಾಯಿ, ಏನು ಹೇಳಲಿ ? ನಾನು ಮಾಡಿದ ಪಾಪಕ್ಕೆ ಮೂರ್ತಿಮಂತ ಪಾಪವು ಕೂಡಾ ಹೆದರಿಕೊಂಡಿರಬಹುದು ! ಅಂದು ನಾನು ಮಾಡಿದ ಘೋರ ಕೃತ್ಯದಿಂದುಂಟಾದ ದೃಶ್ಯವು (ತಳುವನು) ಸದಾ ನನ್ನ ಕಣ್ಣುಗಳನ್ನು ಬೇಯಿಸುತ್ತಿದೆ ! ಆ ದೇವತೆಯನ್ನು, ಆ ನನ್ನ ಗೃಹಲಕ್ಷ್ಮಿಯನ್ನು, ಗರ್ಭಿಣಿಯಾಗಿದ್ದವಳನ್ನು, ಪರಿಪರಿಯ ದುಃಶಬ್ದಗಳಿಂದ ನಿಂದಿಸಿ, ಕೊನೆಗೆ ಪಿಶಾಚಿಯಾದ ನಾನು ಒದೆದು ಉರುಳಿಸಿದೆನು. ಮರ್ಮಕ್ಕೆ ಪೆಟ್ಟು ಬಿದ್ದದರಿಂದ ಆ ಸಾಧ್ವಿಯು, ಗರ್ಭವತಿಯಾದ ಆ ಸಾಧ್ವಿಯು, ಮೇದಿನಿಯ ಮೇಲೆ ಬಿದ್ದು ಹೊರಳಾಡಿದಳು; ಭೋರಾಡಿ ಅತ್ತಳು; ಪಾಪಿಯಾದ ನನಗೆ ಕೊಳೆತು ಕೊಳೆತು ಸಾಯಿಯೆಂದು ಶಾಪಕೊಟ್ಟಳು ! ಕೊನೆಗೆ ಈ ಕಠೋರವಾದ ಜಗದಲ್ಲಿ ಬಾಳುವದು ನಿರರ್ಥಕವೆಂದೆಣಿಸಿ ನದಿಯಲ್ಲಿ ಧುಮುಕಿ ಪ್ರಾಣವನ್ನು ಕೊಟ್ಟಳು !

**ಶಾರದಾ**— ರಾಯರೆ, ಗತಗೋಷ್ಟಿಗಳನ್ನು ನೆನೆದು ವ್ಯಸನಪಟ್ಟುಕೊಳ್ಳಬೇಡಿ. ಅದು ಕ್ಷೀಣವಾದ ತಮ್ಮ ಪ್ರಕೃತಿಗೆ ಹಿತವನ್ನು ಮಾಡದು. ಇನ್ನು ಶೇಷಾಯುಷ್ಯದ ಕಾರ್ಯಗಳಾಲೋಚನೆಯನ್ನು ಮಾಡಿ ಶಾಂತರಾಗಿರಿ !

**ಮಾಧವ**— ಬಾಯಿ, ಆ ನನ್ನ ಪರಮಾಪ್ತ ಮಿತ್ರನೂ ದಯಾಳುವೂ, ವಿಶೇಷವೇನು ?—ಈ ಭೂಲೋಕದ ನಿಜವಾದ ದೇವಸಮನಾದ ಪದ್ಮನಾಭಾಚಾರ್ಯನು ತನ್ನ ತಂಗಿಯ ಹಿತಕ್ಕಾಗಿ ನನಗೆ ಹೇಳಬಂದರೆ ಬಗೆಬಗೆಯ ಭಂಡ ಮಾತುಗಳನ್ನಾಡಿ ಆ ಬ್ರಾಹ್ಮಣನ ಮಾನಹಾನಿಯನ್ನು ಮಾಡಿದೆನು ! ರಾಕ್ಷಸು

ನಾದ ನನ್ನ ಸಲುವಾಗಿಯೇ ತನ್ನ ಪ್ರೀತಿಯ ತಂಗಿಯು ಆತ್ಮಹತ್ಯೆಯನ್ನು ಮಾಡಿಕೊಂಡಿದ್ದರೂ, ನನ್ನಿಂದ ತಾನು ಆಡಬಾರದ ಮಾತುಗಳನ್ನಾಡಿಸಿಕೊಂಡಿದ್ದರೂ, ಅವೆಲ್ಲವನ್ನು ಮರೆತು ಆ ಸತ್ಪುರುಷನು ಮುಂದೆ ಮಹಾರೋಗಪೀಡಿತನಾದ ನನ್ನ ರೋಗನಿವಾರಣೆಗಾಗಿ ಭಯವಿಲ್ಲದೆ ಯತ್ನಪಟ್ಟನು !! ಆದರೆ, ಸಾಧ್ವಿಯ ಶಾಪ, ಆ ಗರ್ಭವತಿಯಾದ ಬಡವಿಯ ಶಾಪ, ಆ ನಿರ್ಮಲ ನಾರಿಯ ಶಾಪ, ನನ್ನನ್ನು ಕಾಡದೆ ಬಿಡಲಿಲ್ಲ !

**ಶಾರದಾ—** ರಾಯರೆ, ಅವಳು ತಮ್ಮ ಸಹಧರ್ಮಿಣಿಯಾಗಿದ್ದರೆ ಹಾಗೆ ಶಾಪವನ್ನು ಕೊಡುತ್ತಿದ್ದಳೆ ? ಪತಿಯ ವಿಷಯವಾಗಿ ಪತ್ನಿಯು ಹಾಗೆ ವರ್ತಿಸಬಹುದೆ ?

**ಮಾಧವ—** ಸ್ವಲ್ಪಾದರೂ ನಾನು ಪತಿಯಂತೆ ವರ್ತಿಸಿದ್ದರೆ ಆ ಸತಿಯು ನನ್ನನ್ನು ದೇವರಿಗಿಂತಲೂ ಹೆಚ್ಚಾಗಿ ಪೂಜಿಸುತ್ತಿದ್ದಳು ! ನಾನವಳ ಮಾನಹಾನಿಯನ್ನು ಮಾಡಲುದ್ಯುಕ್ತನಾದೆನು ! ಅವಳನ್ನು ವ್ಯಭಿಚಾರಿಣಿಯರ ಪಂಜ್ತಿಯಲ್ಲೆಳೆದೆನು ! ಅವಳು ಬದುಕಿದ್ದರೆ ಜಗವು ಆ ಸ್ಥಿತಿಯುಳ್ಳವಳದೆಷ್ಟು ಅಪಮಾನವನ್ನು ಮಾಡುತ್ತಿತ್ತೋ ಕಾಣೆ ! ಮಾನವಂತಿಯಾದವಳು ಆ ಪ್ರಸಂಗವು ಬರುವದಕ್ಕಿಂತ ಮೊದಲೇ ಗಂಗಾಗರ್ಭವನ್ನು ಸೇರಿ ಪಾರಾದಳು ! ಬಾಯಿ, ಪ್ರತ್ಯಕ್ಷ ಸೂರ್ಯನಾರಾಯಣನೆದುರಿನಲ್ಲಿ ನಾನವಳ ಪಾಣಿಗ್ರಹಣ ಮಾಡಿದ್ದೆನು ! ಅಂತಹ ನನ್ನ ಧರ್ಮಪತ್ನಿಯನ್ನು ಪಿಶಾಚಿಗಿಂತಲೂ ಹೆಚ್ಚಾಗಿ ಕಾಡಿದ ನಾನು ಅವಳ ಶಾಪದಂತೆ ಕೊಳೆತು ಕೊಳೆತು ಸಾಯಬೇಕಾಗಿತ್ತು ! ಏತಕ್ಕೆ ನೆಟ್ಟಗಾಗುತ್ತಿರುವೆನು? ನಾನು ನೆಟ್ಟಗಾಗಿ ಜಗತ್ತಿನಲ್ಲಿ ಮಾಡುವದಾದರೂ ಏನು ?

**ಶಾರದಾ—** ರಾಯರೆ, ಈ ಸಂತಾಪಜನಕ ಆಲೋಚನೆಗಳನ್ನು ನೀವು ಬಿಡುವಿರೋ ಇಲ್ಲವೋ ? ಪ್ರಕೃತಿಯು ಗುಣವಾದ ಮೇಲೆ ಅಪ್ಪಾಜಿಯವರ ನೇತೃತ್ವದಲ್ಲಿದ್ದು ನಿಮ್ಮ ಆ ಪುಣ್ಯವತಿಯಾದ ಗತ ಸತಿಯ ಪ್ರೀತ್ಯರ್ಥವಾಗಿ ದರಿದ್ರನಾರಾಯಣ ಸೇವಾಮಗ್ನರಾಗಿ ಪಾಪಕ್ಷಾಲನೆಯನ್ನು ಮಾಡಿಕೊಳ್ಳುವಿರಂತೆ !

**ಮಾಧವ—** ಆಗಲಿ, ಬಾಯಿ. ನಿಮ್ಮಪ್ಪಣೆಯಂತೆ ನಡೆದುಕೊಳ್ಳುವೆನು !

**ಶಾರದಾ—** ಹೂಂ! ಏಳಿರಿ, ಚನ್ನಾಗಿ ಒಂದೆರಡು ತಾಸು ಶುದ್ಧವಾದ ಹವೆಯಲ್ಲಿ ಅಡ್ಡಾಡಿ ಬನ್ನಿರಿ! (ಮಾಧವರಾಯ ಅಗಲಿಯೆಂದು ಹೋಗುವನು) ನನ್ನ ದೇವರ ಪ್ರಕೃತಿಯು ಗುಣವಾಗುತ್ತ ನಡೆದಿದೆ! ನನ್ನ ಸೌಭಾಗ್ಯದ ಬಲವು ಬಲವಾಗಿದೆ. ನನ್ನ ಉಪಾಸ್ಯದೈವತವು ದಿನಾಲು ಪ್ರೇಮದಿಂದ ನನ್ನ ಸೇವೆಯನ್ನು ಕೊಳುತ್ತಲಿದೆ. ಇದೆಲ್ಲವೂ ಆ ಆಶ್ರಮವಾಸಿ ಪತಿತಪರಾವರ್ತಕ ದಯಾನಿಧಿಯಾದ ಮಹಾತ್ಮರ ಆಶೀರ್ವಾದ ಬಲವಲ್ಲದೆ ಬೇರೆ ಏನಿದೆ? (ಅತ್ತಿತ್ತ ನೋಡಿ) ನನ್ನ ದೇವರು ಈ ದಿನ ಬಹು ವ್ಯಸನದಲ್ಲಿದ್ದಾರೆ! ಸಂತಾಪಾತಿರೇಕದಿಂದ ಜೀವಕ್ಕೇನಾದರೂ ಅಪಾಯವನ್ನು ಮಾಡಿಕೊಳ್ಳಲಿಕ್ಕಿಲ್ಲವಷ್ಟೇ? ಮನಕ್ಕೆ ಬಹು ಅನುಮಾನವಾಗುತ್ತಲಿದೆ! ಅಷ್ಟೇಕೆ ವಿಚಾರ? ಅವರಿಗೆ ತಿಳಿಯದಂತೆ ನಾನವರನ್ನು ಹಿಂಬಾಲಿಸಿದರಾಯಿತು!

(ಮಹಲಿನಲ್ಲಿ ಕನ್ನಡಿಯನ್ನು ನೋಡಿಕೊಳ್ಳುವ ಬಾದಿಲುಡುಪಿನ ಮನೋರಮೆ)

**ಮನೋರಮೆ—** ಇವತ್ತು ನನ್ನದೆಷ್ಟು ಗೌರವವಾಯಿತು! ಸುಪ್ರಸಿದ್ಧ ಉಪನ್ಯಾಸಕಾರರಾದ ತಪಸ್ವೀ ಹರಡೀಕರ ಮಂಜಪ್ಪನವರ ಉಪನ್ಯಾಸವು ನನ್ನ ಅಧ್ಯಕ್ಷತೆಯಲ್ಲಾಯಿತಲ್ಲವೆ! ಸಭೆಯ ಪ್ರವರ್ತಕರೊಳಗಿನವರಾದ ಹಿರಣ್ಯಗರ್ಭಾಚಾರ್ಯರು ಅಧ್ಯಕ್ಷಸ್ಥಾನಕ್ಕೆ ನನ್ನ ಹೆಸರನ್ನು ಸೂಚಿಸುವಾಗ ನನ್ನನ್ನು ಎಷ್ಟೊಂದು ಕೊಂಡಾಡಿದರು! ನಾನು ಆದರ್ಶವಿದುಷಿಯೆಂತೆ! ಸ್ವದೇಶಪ್ರೇಮವು ನನ್ನಲ್ಲಿ ತುಂಬಿತುಳುಕುತ್ತಿರುವದಂತೆ!! ಉಚ್ಚ ಶಿಕ್ಷಣದ ಸುಪರಿಣಾಮವಾದುದರಿಂದ ಕೇವಲ ವಿನಯವು ನನ್ನಲ್ಲಿ ಮನೆಮಾಡಿಕೊಂಡಿರುವದಂತೆ!!! ನಾನು ಆಧುನಿಕ ಸಾವಿತ್ರಿಯಂತೆ!— ಅತಿ ದರಿದ್ರನಾದ ಸತ್ಯವಾನನ ಸೇವೆಯನ್ನು ಏಕನಿಷ್ಠೆಯಿಂದ ಮಾಡಿದ ಸಾಧ್ವಿಯು ಆ ಸಾವಿತ್ರಿಯಾದರೆ, ಮಹಾರೋಗಪೀಡಿತನಾದ ಪತಿಯ ಸೇವೆಯನ್ನು ನಿರಲಸವಾಗಿ ಮಾಡಿದ ಸಾವಿತ್ರಿಯು ಇವಳೆಂದು ನನ್ನ ಕಡೆಗೆ ಬೊಟ್ಟುಮಾಡಿ ತೋರಿಸಿದರು. ಆಗ ಸಭಾಮಂದಿರದಲ್ಲಿದ್ದ ಕರತಾಡನಗಳ ಪ್ರಚಂಡ ಕೋಲಾಹಲವೆಷ್ಟು! ಅನುಮೋದಕರಾದ ಆ ಮಾತಾಬಾಯಿಯವರಂತೂ ನಾನು ನಮ್ಮ ಕನ್ನಡನಾಡಿನ ಸರೋಜಿನೀ ದೇವಿಯೆಂದು ಹೇಳಿದರು. ಪುನಃ ಪ್ರಚಂಡ ಕರತಾಡನದ ಕಡಕಡಾಟವೇ!,

ಇಂಥ ಆದರ್ಶ ನಾರೀರತ್ನಗಳಿಂದಲೇ ನಮ್ಮ ದೇಶೋದ್ಧಾರವಾಗತಕ್ಕದ್ದೆಂದೂ ಹೇಳಿದರು! ಆಗ ಮತ್ತೆ ಅತ್ಯದ್ಭುತವಾದ ಕರತಾಡನಗಳ ಪ್ರಚಂಡವಾದ ಕೋಲಾಹಲ! ಹೀಗೆ ಹೊಗಳಿಸಿಕೊಳ್ಳುತ್ತಿರುವಾಗ ನನ್ನ ಕಿವಿಗಳೊಳಗೆ ಕ್ರೂರ ಲಗುಡ ಸೇರಿಸಿ ತಿರುವಿದಂತಾಗುತ್ತಿತ್ತು! ಆ ಕರತಾಡನ ಸ್ಫೋಟವಾದ ಕೂಡಲೆ ನನ್ನ ತಲೆಗೆ ಸಿಡಿಲುಬಡಿದಂತಾಗುತ್ತಿತ್ತು! ಆಹಾಹಾ! ಏನಾಮನೋಮಯ ಯಾತನೆಯು ಭೀಷಣ ಭಲ್ಲಾಘಾತ? ಇಷ್ಟೆಲ್ಲ ಅಂತಃಸಂತಾಪಗಳನ್ನು ನಾನು ಆ ಕಾಲಕ್ಕೆ ಹೇಗೆ ಸಹಿಸಿದೆನೊ ನಾ ಕಾಣೆ! ಅಂತೂ ಇಂತೂ ನನ್ನ ಮನೋವಿಕಾರಗಳನ್ನೆಲ್ಲ ಹೇಗೋ ಹತ್ತಿಕ್ಕಿಟ್ಟುಕೊಂಡು ಸಭೆಯ ಅಧ್ಯಕ್ಷ ಸ್ಥಾನವನ್ನು ಕೈಕೊಂಡು ಉಪಕ್ರಮದ ಶಿಷ್ಟಾಚಾರವನ್ನು ಮುಗಿಸಿದೆನು. ಉಪನ್ಯಾಸಕರ ಉಪನ್ಯಾಸ ನಡೆದಾಗ್ಗೆ ದೊರೆತ ಅವಕಾಶದಲ್ಲಿ ಪ್ರಕ್ಷುಬ್ಧವಾದ ನನ್ನ ಮನಸನ್ನು ತುಸು ಸ್ಥಿರಗೊಳಿಸಿಕೊಂಡು ಉಪಸಂಹಾರದ ಕಾರ್ಯವನ್ನೂ ಸಾಂಗಗೊಳಿಸಿದೆನು. ನನ್ನ ಉಪಸಂಹಾರದ ಭಾಷಣ ನಡೆದಾಗ್ಗೆ, ಎತ್ತ ನೋಡಿದತ್ತ, ಆದರಯುಕ್ತ ಆಶಾಪೂರ್ಣ ನೋಟದಿಂದ ನನ್ನನ್ನೀಕ್ಷಿಸುವ ಕಣ್ಣುಗಳನ್ನು ನೋಡುವಾಗ್ಗೆ ನನ್ನ ಕಣ್ಣೀರು ಕಾರಂಜಿಯಾಗಿ ಪುಟಿಯುವ ಸಂದರ್ಭದಲ್ಲಿತ್ತು! ಅದನ್ನು ಹೇಗೆ ಸಹಿಸಿದೆನೋ ತಿಳಿಯದು! ಆಗ ಒಂದು ಮಹತ್ಸಂಕಟದೊಳಗಿಂದ ಪಾರಾದೆನೆಂಬೊಂದು ಬಗೆಯ ಸ್ವಾಸ್ಥ್ಯವು ನನಗೆ ಅಲ್ಪಮಾತ್ರ ಹೊಳೆದಂತಾಯಿತು! ಆದರೆ– ಆದರೆ– ಇದೆಂಥ ಮೋಸಗಾರಿಕೆಯು! ತ್ರಿಕಾಲದಲ್ಲಿಯೂ ಇದಕ್ಕೆ ಪ್ರತಿಯುಂಟಾಗಲಾರದು. ನನ್ನ ಜನ್ಮವೆಂತಹದು? ಪಿಶಾಚಿಯದೊ ರಾಕ್ಷಸಿಯದೊ? ಸಾವಿತ್ರೀ, ಸರೋಜಿನೀ, ಕಮಲಾದೇವೀ ಮೊದಲಾದ ದೇವತಾಸಮಾನ ಸ್ತ್ರೀಯರ ಸಾಮ್ಯವನ್ನು ಈ ಜಗತ್ತು ನನಗೆ ಕೊಡುತ್ತಿರುವದು! ಇದೇನು ವಿಪರೀತ? ಇಹಲೋಕ ಭೋಗಾದಿಗಳನ್ನು ಎಡಗಾಲಿನಿಂದೊದ್ದು ಕೇವಲ ಭಾರತೀಯ ಬಡಜನರ ಹಿತಕ್ಕಾಗಿ ಬದ್ಧಕಂಕಣರಾದ ತಪಸ್ವಿನಿಯರವರು! ನನಗವರ ಸಾಮ್ಯವೆ? (ಕಪಾಳಕ್ಕೆ ಹೊಡೆದುಕೊಂಡು) ನಾನು ವ್ಯಭಿಚಾರಿಣಿ; ಬೇಸರಿಯಿಂದ ನರಳುತ್ತಿರುವ ನನ್ನ ಪತಿಯನ್ನು ಮೋಸಗೊಳಿಸುತ್ತಿರುವ ಕಳ್ಳ ಸ್ವೈರಿಣಿ! ದೇಶೋದ್ಧಾರಕಿ

ಯರ ಈ ವೇಷಕ್ಕೆ ಅಪಮಾನವನ್ನು ಮಾಡುವ ಅಕ್ಷಮ್ಯ ಅಪರಾಧಿಯಾದ ನಾನು ಕುಟಿಲ ಮಾರ್ಗಾನುಸಾರಿಣಿ! ಸುವಿಚಾರಸದಾಚಾರಂಗಳ ಲೇಶವಿಲ್ಲದೆ ಬರೀ ವೇಷಮಾತ್ರದಿಂದ ಜನರ ಕಣ್ಣಿಗೆ ಮಣ್ಣುಗ್ಗಿ ವೃಥಾ ಸ್ತೋತ್ರ ಮಾಡಿಸಿ ಕೊಳ್ಳುವ ಠಕ್ಕ ಜಾರಿಣಿ! ನನಗೀ ವೇಷವು ಸಲ್ಲದು, ಯಾವ ಕಾಲಕ್ಕೂ ಸಲ್ಲದು. ನಾನು ಹೊಲತಿಯಾಗಿ ಬೀದಿಯನ್ನುಡುಗುತ್ತ ಹೊರಡಬೇಕು. ಆದರೆ, ಇಡೀ ಗ್ರಾಮವನ್ನು ನಿರ್ಮಲೀಕರಿಸುವ ಆ ಪುಣ್ಯವಂತರ ಸಾಮ್ಯವು, ಅಂತಃಕರಣದಲ್ಲಿ ಅನೇಕ ಬಗೆಯ ಹೊಲಸನ್ನಿಟ್ಟುಕೊಂಡಿರುವ ನನಗೆ ಸಲ್ಲುವದೆ? ಹಾಗಾದರೆ, ನಾನು ಭಂಗಿಯು. ಛಿ-ಛಿ-ಛೀ, ಮಕ್ಕಳ ಮಲಮೂತ್ರಗಳನ್ನು ಹೇಸಿಕೆಯಿಲ್ಲದೆ ತೊಳೆಯುವ ತಾಯಿಯಂತಿರುವ ಅವರ ಹೆಸರನ್ನು ಮಹಾತ್ಮಾಜಿಯಂಥವರು ತಾವು ಪ್ರೇಮದಿಂದ ಧರಿಸಿದ್ದಾರೆ. ಅದು ಕುಟಿಲಯಾದ ನನಗೆ ಹೇಗೆ ಸಲ್ಲೀತು? ಹಾಗಾದರೆ ನಾನು ಯಾರು? ನಾಯಿ. ಅಲ್ಲ! ನಾಯಿಯಲ್ಲಿ ಪ್ರಾಮಾಣಿಕತನದ ಅದ್ವಿತೀಯವಾದ ಗುಣವಿದೆ. ನಾನೋ, ನನ್ನ ಸಾಕ್ಷಾತ್ ದೈವತವಾದ ಪತಿಯೊಡನೆ ಪ್ರತಾರಣೆಯನ್ನು ಮಾಡಿದ ವಂಚಕಳು! ಹಾಗಾದರೆ, ನನಗೆ ಪ್ರಪಂಚದಲ್ಲಿ ಸ್ಥಾನವಾವದು? ನನಗೆ ಪ್ರಪಂಚದಲ್ಲಿ ಸ್ಥಾನವೆಲ್ಲಿ? ಪತಿಯನ್ನು ಮೋಸಗೊಳಿಸುವ ಠಕ್ಕ ಜಾರಿಣಿಗೆ ಪ್ರಪಂಚದಲ್ಲಿ ಸ್ಥಾನವೆಲ್ಲಿ? ಅವಳ ಮನೆಯೆಂದರೆ ನರಕ! ರೌರವ ನರಕ!!

**ಭಗೀರಥ**— (ಪ್ರವೇಶಿಸಿ) ಎಲ್ಲಿದೆ ಮನೋರಮೆ ನರಕ?

**ಮನೋ**— ಎಲ್ಲಿದೆ? ನಮ್ಮಿಬ್ಬರ ಮನದಲ್ಲಿದೆ! ನಾವಿಬ್ಬರೂ ಇರುವ ಸ್ಥಲದಲ್ಲಿದೆ! ನಮ್ಮಿಬ್ಬರ ಸಮ್ಮೀಲನ ಕಾಲದಲ್ಲಿ ಅದರ ಅಸಹ್ಯವಾದ ದುರ್ಗಂಧವೇಳುತ್ತದೆ! ಅದನ್ನು ಸಹಿಸಲಾರದೆ ದೇವತೆಗಳೆಲ್ಲರೂ ಮಾಯವಾಗಿ ಬಿಟ್ಟಿದ್ದಾರೆ! ಲೋಕವು ದಾನವರ ಪಾಲಾಯಿತು; ದಾನವೀದೀಕ್ಷೆಯನ್ನು ಹೊಂದಿತು! ಈ ಅನಾಹುತಕ್ಕೆ ಕಾರಣರಾರು? ನನ್ನಂಥ ನಾರಿ, ನಿನ್ನಂಥ ಬ್ರಹ್ಮಚಾರಿ! (ಅವನೆದೆಗೆ ತಟ್ಟುವಳು)

**ಭಗೀರ**— (ಅವಳ ಕೈಯನ್ನು ಗಟ್ಟಿ ಹಿಡಿದು) ಅಹಹಾ! ಈ ಕೋಮಲ ಕೈಗಳ ಪೆಟ್ಟು ಮನಕ್ಕೆ ಎಷ್ಟು ಆನಂದವನ್ನುಂಟುಮಾಡಿತು! ಮನೋರಮೆ. ಇಂದು

ನಾನು ನಿನ್ನ ಅತಿಶಯ ಮೋಹಕಭಾವಪೂರ್ಣವಾದ ಚಿತ್ರವನ್ನು ನೋಡುತ್ತ ಲಿದ್ದೇನೆ! ಉಪಾಸಕನು ದೇವರನ್ನು ಬಗೆಬಗೆಯ ಭಾವಗಳಲ್ಲಿ ನೋಡಿ ಹೇಗೆ ಆನಂದಪಡುವನೊ, ಹಾಗೆ ನಾನು ನಿನ್ನ ಅನೇಕ ಭಾವಸಮ್ಮಿಶ್ರವಾದ ಈ ಮುಖಾರವಿಂದವನ್ನು ನೋಡಿ ಪುಲಕಿತಾನಂದವನ್ನು ಹೊಂದಿದ್ದೇನೆ! ನಿತ್ಯದಲ್ಲಿ ಶೃಂಗಾರಭಾವಪೂರ್ಣಯಾದ ನಿನ್ನಾಲಿಂಗನದಿಂದ ಕೆಲ ಮಟ್ಟಿಗೆ ಬೇಸರಪಟ್ಟ ಮನಕ್ಕೆ ಈ ದಿನದ ನಿನ್ನೀ ಬೇರೆ ವಿಧವಾದ ಪರಿಷ್ವಂಗದಿಂದ ಅದಾವ ಬಗೆಯ ಆನಂದವುಂಟಾಗುವದೋ ನೋಡುವೆನು. (ಅಪ್ಪುವ.)

**ಮನೋ—** ( ಅವನನ್ನು ಒದೆದು ನೆಲಕ್ಕುರುಳಿಸಿ ) ಹೇಗಿದೆ, ಈ ದಿನದ ಆನಂದಾನುಭವ ?

**ಭಗೀರ—** ನಿಸ್ಸಂದೇಹವಾಗಿ ಶ್ರೇಯಸ್ಕರ ಆನಂದದ ಸಂದರ್ಭವೆ! ಅಂತೇ ಮಹಾಕವಿಗಳು ಇಂತಹ ಪ್ರಸಂಗವನ್ನು "ಲಂಬಕುಚಾಲಿಂಗನತೋ ಲಿಕುಚ ಕುಚಾಯಾಃ ಪಾದತಾಡನಂ ಶ್ರೇಯಃ" ಎಂದು ಒಳ್ಳೆ ಮಾರ್ಮಿಕವಾಗಿ ವರ್ಣಿಸಿದ್ದಾರೆ.

**ಮನೋ—** ಕಾಮಾಂಧ ರಾಕ್ಷಸಾ, ನೀನಿಲ್ಲಿಂದ ಹೊರಟುಹೋಗು. ನನಗೆ ನಿನ್ನ ದರ್ಶನವೂ ಬೇಡಾಗಿದೆ.

**ಭಗೀ--** (ಸ್ವಗತ) ಈ ದಿನದ ಇವಳ ಬಣ್ಣವೇ ಏಕೊ ಬೇರೆಯಾಗಿದೆ. ಇಂದಿನ ಸಭೆಯ ಪರಿಣಾಮವೇನಾದರೂ ಆಗಿರಬಹುದೆ? — ( ಪ್ರಕಾಶ ) ಮನೋರಮೆ, ಪ್ರಿಯೆ, ಮನೋರಮೆ !

**ಮನೋ—** ಸಾಕುಮಾಡು ! ತಿರುಗಿ ನನ್ನ ಹೆಸರೆತ್ತಬೇಡಾ !

**ಭಗೀರ—** ಏತಕ್ಕೆ ನೀನು ನನ್ನ ಮೇಲೆ ಇಷ್ಟು ಕುಪಿತಳಾದೆ ? ನನ್ನಿಂದೇ ನಪರಾಧವಾಗಿದೆ ? ಪ್ರಿಯೆ, ಮೋಹಿನೀ.

**ಮನೋ—** ನಿರ್ಲಜ್ಜಾ, "ಪ್ರಿಯೆ, ಮೋಹಿನೀ," ಪರಾಂಗನೆಗೆ ಪ್ರಿಯೆ ಮೋಹಿನೀ ಎಂದು ಹೇಳುತ್ತಲಿದ್ದಾನೆ !!

**ಭಗೀ—** ಇಷ್ಟೊಂದು ಕೋಪಬೇಡ ಮನೋರಮೆ. ಉಭಯರೂ ಒಂದೇ ವರ್ಗದವರಾಗಿದ್ದೇವೆ. ಹೇಗೆ ನನಗೆ ಪರಾಂಗನೆಗೆ ಪ್ರಿಯೆ ಮೋಹಿನೀಯೆನ್ನುವ ರೂಢಿಯಾಗಿದೆಯೋ • ಹಾಗೆಯೇ ನಿನಗೆ ಪರಪುರುಷನಿಗೆ ಪ್ರಿಯಾ ಮೋಹ ನಾಂಗಾ ಎನ್ನುವ ರೂಢಿಯಾಗಿದೆ. ಹೀಗಿರಲು ಯಾರನ್ನು, ಯಾರು ನಿಂದಿಸುವದು!

**ಮನೋ—** ಜನ್ಮವಿರುವತನಕ ನಾನಿನ್ನು ಮೇಲೆ ಪರಪುರುಷನ ಮುಖವನ್ನು ನೋಡಲಿಕ್ಕಿಲ್ಲ!

**ಭಗೀ—** ಪರಪುರುಷನ ಮುಖವನ್ನು ನೋಡಲೇ ಬೇಡಾ! ಸ್ವಪುರುಷ ನಾದ ನನ್ನ ಮುಖವನ್ನಷ್ಟೇ ನೋಡು!

**ಮನೋ—** ನೀನು ನನ್ನ ಮನೆಯನ್ನು ಬಿಟ್ಟು ಈ ಕ್ಷಣವೇ ಹೊರಟು ಹೋಗು.

**ಭಗೀ—** ಮನೋರಮೆ, ಹೆಚ್ಚಾಗಿ ಜಂಭಕೊಚ್ಚಬೇಡಾ. ನಿನಗೆ ಮರ್ಯಾದೆಯು ಬೇಕಾಗಿದ್ದರೆ ಈವರೆಗೂ ನನ್ನೊಡನೆ ಹೇಗೆ ನಡೆದುಕೊಂಡೆಯೋ ಹಾಗೆಯೇ ನಡೆದುಕೋ! ಇಲ್ಲವಾದರೆ ಮನೋರಮೆಯು ಬೀದಿಯ ಬಸವಿಯಾಗಿದ್ದಾಳೆಂದು ಡಂಗುರ ಹೊಡಿಸಿಬಿಟ್ಟೇನು!

**ಮನೋ—** ಹಾಗೆಮಾಡಿದರೆ ತುರಂಗದ ಗಾಳಿಯನ್ನು ತಿನ್ನಲಿಕ್ಕೆ ಹಚ್ಚೇನು!

**ಭಗೀ—** ಹೊ ಹೋ! ಹೀಗೋ? ತಾಳು ತಾಳು!! ನನ್ನ ನಿನ್ನ ಸಮ್ಮೇಲನದ ಚಿತ್ರಗಳ ಸಾವಿರಾರು ಬಣ್ಣದ ಪಟಗಳನ್ನು ರವಿವರ್ಮ ಚಿತ್ರಶಾಲಾ ಪ್ರೆಸ್ಸಿನಿಂದ ಮುದ್ರಿಸಿ ತರಿಸುವೆನು. ಆ ಮೇಲೆ ಬಾಜಾರದಲ್ಲಿ ಕೊಟ್ಟಷ್ಟು ಬೆಲೆಗೆ ಮಾರಾಟಮಾಡಿಸುವೆನು. ಚಿತ್ರದಡಿಯಲ್ಲಿ "ಭಗೀರಥ–ಮನೋರಮಾ"ಯೆಂದು ಹೆಸರುಗಳನ್ನೂ ಹಾಕಿಸುವದಕ್ಕೆ ಮರೆಯುವದಿಲ್ಲ. ಚಿಂತಿಸಬೇಡಾ.

**ಮನೋರಮೆ —** ಅಗತ್ಯವಾಗಿ ಮಾಡು. ಹಾಗೆ ಮಾಡದಿದ್ದರೆ ನಿನಗೆ ದೇವರಾಣೆಯಾಗಿದೆ. ನನಗೆ ನನ್ನ ಪಾಪದ ಪ್ರಾಯಶ್ಚಿತ್ತವನ್ನು ಹೊಂದತಕ್ಕದ್ದಿದೆ. ನೀನಷ್ಟು ಕೆಲಸವನ್ನು ಮಾಡುವದಕ್ಕಿಂತ ಮೊದಲೇ ನಾನು ನನ್ನ ಸ್ವಾಮಿಯಲ್ಲಿ ಮಾಡಿದ ಪಾಪಗಳನ್ನೆಲ್ಲಾ ಹೇಳಿಬಿಡುತ್ತೇನೆ! ಚಿಂತಿಸಬೇಡಾ



೫–೩೧೪೭

ಒಂದು ಸಾರೆ ಜಗತ್ತಿಗೆ ತಿಳಿದುಹೋಗಲಿ, ಗೋಮುಖವ್ಯಾಘ್ರಗಳ ಸ್ವರೂಪವು ಹೇಗಿರುವವೆಂಬುದು. ಭಗೀರಥಾ, ನಿನಗಾದರೂ ಇಂದು ನಾನು ಇದೇ ಹೇಳತಕ್ಕವಳಿದ್ದೆನು. ಮಾಡಿದ ಪಾಪಗಳನ್ನು ಆಡಿ ಕಳೆದುಕೊಳ್ಳಬೇಕಂತೆ! ಅದಕ್ಕಾಗಿ ಹೂಂ, ಪ್ರಾರಂಭಿಸು! ಭಗೀರಥಾ ಪ್ರಾರಂಭಿಸು! ಪಾಪವಿಮುಕ್ತರಾದಮೇಲೆ ಮುಂದೆ ಸಾಯುವತನಕ ಸುವಿಚಾರದಿಂದಿದ್ದು ಲೋಕಸೇವೆಯನ್ನು ಮಾಡುವ! ಭಾರತಮಾತೆಯ ಸಂತಾನಕ್ಕೆ ಸರ್ವೋತ್ಕೃಷ್ಟವಾದ ಸಂಧಿಯು ಬಂದಿದೆ! ಅದಕ್ಕಾಗಿ ಹೂಂ, ಹೇಳು ತೀವ್ರ, ಜಗವೇ ನಾನು ಮನೋರಮೆಯು ಜಾರನೆಂದು! ನಾನಾದರೂ ಭಗೀರಥನ ಜಾರಿಣಿಯೆಂದು ಹೇಳೇ ಬಿಡುವೆನು! ಆಬಾಲವೃದ್ಧರು ನಮ್ಮಮೇಲೆ ಉಗುಳುವರು; ಉಗುಳಿಸಿಕೊಳ್ಳುವಾ! ಬೈಯ್ಯುವರು; ಬೈಯಿಸಿಕೊಳ್ಳುವಾ! ಯಾರಾದರೂ ಹೊಡೆಯಲುದ್ಯುಕ್ತರಾದರೆ ಮೈ ಹುಳಿಯುವಂತೆ ಅವರಿಂದ ಹೊಡಿಸಿಕೊಳ್ಳುವಾ! ಮೇಲೆ ಹೊಲಸನ್ನುಗ್ಗಲು ಬಂದರೆ ತಲೆಬಗ್ಗಿಸಿಕೊಂಡು ನಿಲ್ಲುವಾ! ಹೂಂ, ತಡವೇಕೆ ಮಾಡುವಿ? ಶುಭಸ್ಯ ಶೀಘ್ರಂ; ಲೋಕವೇ ನಾನು ಜಾರಣಿ; ಭಗೀರಥನ ಜಾರಿಣಿ! (ಹೋಗುವಷ್ಟರಲ್ಲಿ ಭಗೀರಥ ಅವಳನ್ನು ತಡೆಯುವನು)

**ಮಾಧವ**—(ನೋಡಿ ಹಿಂದಕ್ಕೆ ಸರಿದು) "ನಾನು ಭಗೀರಥನ ಜಾರಿಣಿ"!! ಯಾರು? ಮನೋರಮೆಯು ಭಗೀರಥನ ಜಾರಿಣಿ! ಇದೇನು ವಿಚಿತ್ರವಾದ ನಾಟಕವು?

**ಮನೋ**— ನನ್ನನ್ನೇಕೆ ತಡೆಯುವಿ? ಬಿಡು ಹೀಗೆ ತಡೆಯಬೇಡಾ! ನಾನು ಮಾಡಿದ ಪಾಪಗಳನ್ನಾಡಿ ಕಳೆಯುಕೊಳ್ಳತಕ್ಕವಳು!

**ಭಗೀರಥ**— ಹಾಗೆ ಮಾಡುವದರಿಂದ ಪಾಪಗಳು ಕಳೆದು ಹೋಗದೆ ಲೋಕವು ತಿರಸ್ಕಾರದಿಂದ ಛೀ, ಥೂ, ಎಂದು ಉಗುಳುವದು.

**ಮನೋ**— ಅದೇ ಶಿಕ್ಷೆಯು! ಆ ಶಿಕ್ಷೆಯನ್ನು ಭೋಗಿಸದೆ ವಿಧಿ ಇಲ್ಲ! ಮೊದಲು ನನ್ನ ದೇವರಿಗೆ ನಾನು ಭಗೀರಥನ ಜಾರಿಣಿಯೆಂದು ಹೇಳಿಕೊಳ್ಳತಕ್ಕವಳು.

**ಭಗೀರಥ**— ತಕ್ಷಣವೇ ಅವನು ನಿನ್ನನ್ನು ಕೊಂದುಹಾಕುವನು!

**ಮನೋ—** ನನ್ನ ಹಣೇಬರಹವಲ್ಲಾ ಪುಣ್ಯವಿದೆಯೆ ? ದೇವರಿಂದ ಪ್ರೀತಿಯನ್ನು ಹೊಂದುವ ಪುಣ್ಯವು ನನ್ನ ಹಣೇಬರಹವಲ್ಲಿದೆಯೆ ? ಹಾಗಾದರೆ, ನಾನು ಮುಕ್ತಿಯನ್ನು ಪಡೆಯುವೆನು. ಈ ಕ್ಷಣವೇ ಆ ಸಂಧಿಯನ್ನು ಸಾಧಿಸುವೆನು ! (ಹೋಗಲುಪಕ್ರಮ)

**ಭಗೀರಥ—** (ಅವಳ ಕಾಲು ಹಿಡಿದು) ಸ್ವಲ್ಪ ನನ್ನ ಮಾತುಗಳನ್ನಾದರೂ ಕೇಳ ಬಾರದೆ ?

**ಮನೋ—** ಈ ವರೆಗೂ ಕೇಳಿ ಸಾಕಾಗಿದೆ ! ಚಾಂಡಾಲಾ, ನನ್ನ ಸಲುವಾಗಿ ನೀನು ನನ್ನ ಪತಿಯೊಡನೆ ಅನ್ಯೋನ್ಯ ಮಿತ್ರತ್ವವನ್ನು ಬಳಿಸಿದೆಯಲ್ಲವೆ ? ಕೇವಲ ಆತನ ಹಿತಚಿಂತಕನೆನ್ನುವಂತೆ ಅವನ ನೆರಳಿನ ಹಾಗೆ ಯಾವಾಗಲೂ ಅವನ ಜತೆಯಲ್ಲಿರುತ್ತಿದ್ದೆಯಲ್ಲವೆ ? ಸ್ವಲ್ಪವಾದರೂ ಆತನು ನಿನ್ನ ವಿಷಯದಲ್ಲಿ ಸಂಶಯ ಪಡಬಾರದೆನ್ನುವದಕ್ಕೆ ನನಗೆ 'ಅತ್ತಿಗೆ, ಅತ್ತಿಗೆ' ಯೆನ್ನುವ ರೂಢಿಯನ್ನು ಮಾಡಿಕೊಂಡೆಯಲ್ಲವೆ ? ಆತನು ನಿನ್ನನ್ನು ಭಕ್ತಿಯಿಂದ ಕಾಣಬೇಕೆಂದು ಮೇಲೆ ಈ ದೇಶಭಕ್ತನ ವೇಷವನ್ನು ಹಾಕಿದೆಯಲ್ಲವೆ ? ನರಪಿಶಾಚಾ, ಅಂದು ನೀನು ನನ್ನ ಕೈಯನ್ನು ಹಿಡಿದಾಗ್ಗೆ ನನ್ನ ದೇವರು, (ಅಳುತ್ತ) ಮಹಾರೋಗದಿಂದ ಪರವಶವಾದ ನನ್ನ ದೇವರು, ಕಣ್ಣಾರೆ ಕಂಡಾಗ್ಗೆ ಈ ದೇಶೀ ಬಳೆಗಳನ್ನಿಡುವ ನೆವನವನ್ನು ಕೊಟ್ಟು ನೀನು ನಿನ್ನ ಕೃಷ್ಣಕೃತ್ಯಕ್ಕೆ ಸಂಭಾವಿತತನದ ಬಣ್ಣವನ್ನು ಬಳಿದೆ ! ಅದನ್ನು ನನ್ನ ದೇವನು ನಂಬಿದನು ! ನನ್ನ ಮನೋರಮೆಯು ದೇಶೀ ಕಂಕಣಗಳನ್ನಿಟ್ಟುಕೊಂಡಳೆಂದು ಆನಂದಪಟ್ಟನು ! ಅದೇ ಆನಂದದಲ್ಲಿ ದೇಕುತ್ತ ದೇಕುತ್ತ ತನ್ನ ದೇಸಿಕೆಯಾದ ಹಾಸಿಕೆಯಮೇಲೆ ಮಲಗಿದನು! ಆ ಮೇಲೆ ನೀನು—ಆ ಮೇಲೆ ನೀನೇನು ಮಾಡಿದೆ ? ಪ್ರಸಂಗಾವಧಾನದ ಪೌರುಷವನ್ನು ಹೇಳಿಕೊಂಡೆ ! ವಿಕಾರ ಮತ್ತಳಾದ ನನ್ನ ಚುಂಬನವನ್ನು ಯಥೇಚ್ಛವಾಗಿ ಕೊಂಡೆ ! ಚಾಂಡಾಲಾ, ನನ್ನಂಥ ಭಗಿನೀವರ್ಗವನ್ನು ನಿನ್ನಂಥ ನರಪಿಶಾಚಿಗಳ ಬಾಧೆಯಿಂದುಳಿಸುವದಕ್ಕಾಗಿ ನಾನು ನಮ್ಮ ಚರಿತ್ರೆಯ ಡಂಗುರವನ್ನು ಹೊಡೆಯುವೆನು ! ಪ್ರಪಂಚದ ಕಣ್ಣೆದುರಿನಲ್ಲಿ ನಮ್ಮ ವಿಕಾರವಾದ ಚಿತ್ರವನ್ನಿರಿಸುವೆನು !

**ಭಗೀರಥ—** ಮನೋರಮೆ, ಹೇಗೂ ನೀನು ನಿನ್ನ ಪಾಪಕ್ಷಾಲನೆಯನ್ನು

ಮಾಡಿಕೊಳ್ಳುವ ನಿಶ್ಚಯವನ್ನು ಮಾಡಿರುವಿ! ಅದಕ್ಕಾಗಿ ನನ್ನ ಕೊನೆಯ ಕೋರಿಕೆಯನ್ನು ನೆರವೇರಿಸು! ಬೆಳಗಾಗುವತನಕ ತಡೆ. ನಾಳೆಗೆ ಬರೇ ಊರ ಮಟ್ಟಿಗೇಕೆ? ದೇಶವೆಲ್ಲಾ ಡಂಗುರವನ್ನು ಸಾರು. ತಿರುಗಿ ನಾನು ನಿನ್ನ ಕಣ್ಣಿಗೆ ಬೀಳುವದಿಲ್ಲ! ಆದರೆ——

**ಮನೋ—** 'ಆದರೆ'ಯೆಂದು ನಿಲ್ಲುವಿಯೇಕೆ? ಹೇಳುವದನ್ನೆಲ್ಲಾ ಹೇಳು!

**ಭಗೀರಥ—** ಇದೊ, ಹೇಗೋ ನೀನು ಮಾಡಿದ ಪಾಪಗಳನ್ನೆಲ್ಲ ಆಡಿ ಕಳೆದುಕೊಳ್ಳಲಿಕ್ಕೆ ಸಿದ್ಧಳಾಗಿರುವಿ. ಹತ್ತರಗೂಡ ಹನ್ನೊಂದು ಎನ್ನುವಂತೆ ಇದೊಂದುದಿನ ಬೆಳಗಾಗುವ ತನಕ ನಾವು ನೀವು ಯಥೇಚ್ಛ ಆನಂದದಲ್ಲಿ ಕಾಲ ಹರಣ ಮಾಡುವಾ! ಇದೋ ಈ ದಿನದ ನಮ್ಮ ನಾಟಕದ ಕೊನೆಯು ಬಹು ಸರಸವಾಗುವದಕ್ಕೆ ಈ ರಸವನ್ನೂ ತಂದಿದ್ದೇನೆ! ಹೂಂ ಬಾ, ತೀವ್ರ!

(ಅವಳನ್ನಾಲಿಂಗಿಸಲು ಹೋಗುವನು. ಮನೋರಮೆಯು ತಪ್ಪಿಸಿಕೊಂಡು ಅವನನ್ನು ಶಿಕ್ಷಹಾಗೆ ಹೊಡೆಯುವಷ್ಟರಲ್ಲಿ ಶಾರದೆಯು ಅವಳನ್ನು ತಡೆಯುವಳು! ಒಂದೆಡೆ ಮಾಧವ ರಾಯರು ಈ ನೋಟವನ್ನು ನೋಡುತ್ತ ಪ್ರಕಟರಾಗುವರು.)

**ಶಾರದಾ—** ಮನೋರಮಾಬಾಯಿಯವರೆ, ಹೋಗಲಿ ಬಿಡಿ! ಆ ಪ್ರಾಣಿಯ ಪ್ರಾಣವನ್ನು ತೆಗೆದುಕೊಳ್ಳುವದೇಕೆ? ಎತ್ತಾದರೂ ಭೂಮಿಯಲ್ಲಿ ನಾಯಿಯಂತೆ ಕಾಲಹರಣ ಮಾಡಿಕೊಳ್ಳಲಿ! ಜಾರ ಚೋರ ಕರ್ಮಾದಿಗಳನ್ನು ಮಾಡಿ ಜೀವಿಸಿರುವದೇ ಅದರ ಜೀವನದ ಗುರಿಯಾಗಿರಬಹುದು! ತನ್ನ ಹೇತು ಸಾಧನೆಗಾಗಿ, ನೋಡಿ ನೋಡಿ, ಅದು ಹೇಗೆ ದೇಶಭಕ್ತನ ವೇಷವನ್ನು ಹಾಕಿ ಕೊಂಡಿದೆ?

**ಮಾಧವ—** ಎಲೊ, ರಾಕ್ಷಸಾ ಭಗೀರಥಾ!

**ಶಾರದಾ—** ರಾಯರೆ, ಬೈಯ್ಯುವದು ಸಹ ಅದಕ್ಕೆ ಗೌರವವೆ! ಪ್ರಯುಕ್ತ ಅದೂ ಬೇಡಾ! ಎಲೋ ಹೋಗು ಹೋಗು! ಯಾರಿಗೂ ಮೋರೆ ತೋರಿಸ ಬೇಡಾ!

**ಮನೋರ—** (ಮಾಧವರಾಯರ ಕಾಲು ಹಿಡದು) ರಾಯರೇ,



ಶಾರದಾ. ಮನೋರಮಾ. ಮಾಧವರಾಯ. ಭಗೀರಥ.

ಶಾರದಾ:— ಮನೋರಮಾಬಾಯಿಯವರೆ, ಹೋಗಲಿ, ಬಿಡಿ

**ಶಾರದಾ**— ಬಾಯಿ, ನಾವು ನಿಮ್ಮ ಚರಿತ್ರೆಯನ್ನೆಲ್ಲ ಕೇಳಿಕೊಂಡಿದ್ದೇವೆ. ಇನ್ನು ಪುನರುಚ್ಚಾರವು ಬೇಡ.

**ಮನೋರ**— ಅಮ್ಮಾ, ನನ್ನಂಥ ಮೋಸಗಾರ ಜಾರಿಣಿಗೆ ತಾರಕವಾದ ಮಾರ್ಗವೇನಾದರೂ ಇದ್ದರೆ ಹೇಳಬಾರದೇ ? ರಾಯರೆ, ನಾನು ನಿಮ್ಮ ಪಾಲಿಗೆ ನಾಯಿ ಮುಟ್ಟಿದ ಗಡಿಗೆಯಾದೆ.

**ಮಾಧವ** — ಮನೋರಮೆ ? ( ಕಣ್ಣೀರು ಸುರಿಸುವನು )

**ಮನೋ**— ರಾಯರೆ, ಗೃಹಣೀಪದದಿಂದ ಚ್ಯುತಳಾದ ನನ್ನ ಸಲುವಾಗಿ ತಾವು ಸ್ವಲ್ಪವರೂ ನೊಂದುಕೊಳ್ಳಬೇಡಿ ! ನಾನು ಅಸ್ಪೃಶ್ಯಳು ! ನನಗಾವ ಬಂಧನಗಳೂ ಉಳಿದಿಲ್ಲ. ಅನ್ಯಾಯವಾಗಿ ಕೆಲ ಮಾನವ ಬಂಧುಗಳನ್ನು ಅಸ್ಪೃಶ್ಯ ವರ್ಗದಲ್ಲಿ ಗಣಿಸುತ್ತಲಿದ್ದಾರೆ. ನಿಜವಾಗಿ ನನ್ನಂಥ ನಾರಿ ಮತ್ತು ಇವನಂಥ ನರರೇ ಅಸ್ಪೃಶ್ಯರು !

**ಮಾಧವ**— ಮನೋರಮೆ,

**ಮನೋ**— ಅದು ತಮ್ಮ ಗೃಹಿಣಿಯ ಹೆಸರು; ತಮ್ಮ ಧರ್ಮಪತ್ನಿಯ ಹೆಸರು. ನನ್ನನ್ನು ದಾಸಿ ಅಸ್ಪೃಶ್ಯೆಯೆಂದು ಸಂಬೋಧಿಸಿ ! ಆಗಲಿ, ಬರುವೆನು!

**ಶಾರದಾ**— ಸ್ವಲ್ಪ ನಿಲ್ಲಿ—

**ಮನೋ**— ಹಾಂ, ಮುಟ್ಟಬೇಡಿ ! ನಾನು ಅಸ್ಪೃಶ್ಯೆ. ನನ್ನಂಥವಳನ್ನು ಮುಟ್ಟಿದ ಮೈಲಿಗೆಯು ಏನು ಮಾಡಿದರೂ ಹೋಗಲಿಕ್ಕಿಲ್ಲ ! ಹಾದಿ ಬಿಡಿ; ನಾನು ಹೋಗಿ ಬಿಡುವೆನು !

**ಶಾರದಾ**— ಎತ್ತ ಹೋಗುವಿರಿ ? ಏನು ಮಾಡುವಿರಿ ?

**ಮನೋ**— ಮಾಡತಕ್ಕ ಕೆಲಸಗಳು ಬಹಳ ಇವೆ ! ನಾನು ಈ ಕ್ಷಣದಿಂದಲೆ ಮನೆಮನೆಗೂ ಹೋಗಿ ಅಸ್ಪೃಶ್ಯರ ವ್ಯಾಖ್ಯೆಯನ್ನು ಹೇಳುವೆನು. ಅಂಥವರಾರಾದರೂ ನಿಮ್ಮ ಮನೆಗಳಲ್ಲಿದ್ದರೆ ಅವರನ್ನು ಹೊರದೂಡಿರೆಂದು ವಿಜ್ಞಾಪಿಸಿಕೊಳ್ಳುವೆನು ! ಜಾರ, ಚೋರ ಮೊದಲಾದ ಅಸ್ಪೃಶ್ಯ ಕರ್ಮಗಳನ್ನು ಮಾಡು

ವಂಥ ನಾರೀನರರ ಸಂಘವನ್ನು ಪ್ರತಿಯೊಂದು ಗ್ರಾಮದಲ್ಲಿಯೂ ಸ್ಥಾಪಿಸುವೆನು.

ಇಬ್ಬರು— ಅದರಿಂದ ಪ್ರಯೋಜನವೇನು ?

**ಮನೋ**— ಬಹು ಪ್ರಯೋಜನವಿದೆ. ಈ ವರೆಗೂ ಅನ್ಯಾಯವಾಗಿ ಅಸ್ಪೃಶ್ಯರೆನಿಸಿಕೊಂಡವರನ್ನು ಉದ್ಧಾರಮಾಡುವ ಮಹಾತ್ಮರಂಥ ಮಹಾ ಶಕ್ತಿಯೊಂದು ನಿರ್ಮಾಣವಾಗಿದೆಯಷ್ಟೆ? ಆ ಶಕ್ತಿಯು ಅಸ್ಪೃಶ್ಯರನ್ನೆಲ್ಲ ಸ್ಪೃಶ್ಯರನ್ನಾಗಿ ಮಾಡುವದು ! ಆ ಮೇಲೆ ಸಮಾಜದೊಳಗಿನ ಅಸ್ಪೃಶ್ಯರ ಸಲುವಾಗಿ ಕಾಯ್ದಿಟ್ಟ ಬೀದಿಗಳನ್ನು ಗುಡಿಸುವದು, ಬಂಗಿಯ ಕೆಲಸಗಳನ್ನು ಮಾಡುವದು, ಮೊದಲಾದ ಕೆಲಸಗಳಿವೆ ? ಅವುಗಳನ್ನು ಮಾಡುವವರಾರು ? ಅಪೇಕ್ಷೆ ಪಟ್ಟು ಅಸ್ಪೃಶ್ಯರಾದ ನಮ್ಮಂಥವರಲ್ಲವೆ ? ನಮ್ಮಂಥ ನಿಜವಾದ ಅಸ್ಪೃಶ್ಯರೇ ಆ ಕಾರ್ಯಗಳನ್ನು ಮಾಡಬೇಕು. ಆದದರಿಂದ ಹೋಗುವೆನು. ಎಲೋ, ಅಸ್ಪೃಶ್ಯಾ! ಏಳು, ಏಳು; ಮನೆ ಹೊರಬೀಳು! ಅಸ್ಪೃಶ್ಯನಾದ ನೀನು ನಿನ್ನ ಜಾತಿಯನ್ನು ಮುಚ್ಚಿಟ್ಟು ಎಲ್ಲಾದರೂ ಸ್ಪೃಶ್ಯರಲ್ಲಿ ಬಳಿಕೆ ಮಾಡಿದ್ದನ್ನು ಕಂಡೆನೆಂದರೆ, ಅದೇ ಕ್ಷಣವೇ ಊರ ಮುಂದಿನ ತಿಪ್ಪೆಯಲ್ಲಿ ನಿನ್ನನ್ನು ಹುಗಿದುಬಿಟ್ಟೇನು! ದೇವನೇ, ಏನಾದರೂ ಕೆಲಸವಿದ್ದಾಗ್ಗೆ ಬಂದು ನಿಮ್ಮ ತಿಪ್ಪೆ ಕಕ್ಕಸಗಳನ್ನೆಲ್ಲಾ ಸ್ವಚ್ಛಮಾಡುವೆನು ! ( ಸರ್ರನೆ ಹೋಗುವಳು )

**ಶಾರದಾ**— ರಾಯರೆ, ಭಗೀರಥ ಮನೋರಮಾಬಾಯಿಯವರ ಈ ಬೀಭತ್ಸ ನಾಟಕವನ್ನು ನೋಡಿದವರು ನಾವಿಬ್ಬರೆ. ಈ ವಿಷಯವಾಗಿ ತಮಗೆ ನನ್ನದೊಂದರಿಕೆ !

**ಮಾಧವ**— ಅದೇನು ?

**ಶಾರದಾ**— ಈ ವಿಷಯವಾಗಿ ನಾವು ಎಂದೂ ಯಾರ ಮುಂದೂ ಚಕಾರ ಶಬ್ದವನ್ನಾಡಬಾರದು. ಯಾಕೆಂದರೆ, ಮನೋರಮಾಬಾಯಿಯವರು ಹೇಗೆ ಮಾಡಿದ ಪಾಪಗಳನ್ನು, ಆಡಿ ಕಳೆದುಕೊಂಡು ಬಿಟ್ಟರೋ, ಹಾಗೆ ಮಾಡಿದವರ ಪಾಪ ಆಡಿದವರಿಗೆ ಹತ್ತುವದಂತೆ ! ಏನೋ, ಇಂತಹ ವಿಷಯಗಳಲ್ಲಿ ನನ್ನ ವಿಶ್ವಾಸ ಹೆಚ್ಚು. ಅದಕ್ಕಾಗಿ ಹೀಗೆ ಹೇಳಿಕೊಳ್ಳುತ್ತಿರುವೆನು.

**ಮಾಧವ**— ಅಹುದಹುದು, ಬಾಯೀ! ಈ ಪಾಪ-ಶಾಪಗಳ ವಿಷಯವಾಗಿ ನಾನಂತೂ ಅನುಭವಿಸಿಯೇ ಬಿಟ್ಟಿದ್ದೇನೆ! ತಮ್ಮ ಹೇಳಿಕೆಯು ಸಯುಕ್ತಿಕವಾದದ್ದು. ಈ ವಿಷಯದಲ್ಲಿ ನಾನು [illegible] ಎನ್ನಲಿಕ್ಕಿಲ್ಲ. ಶಿವಶಿವಾ! ಈ ಭಗೀರಥ ಮನೋರಮೆಯರ ಅಧಃಪತನಕ್ಕೆ ಆ ಹೊಲೆಯನಾದ ಕಾಮನೇ ಕಾರಣನಲ್ಲವೆ?

**ಶಾರದಾ**— ನೋಡಿ! ನಿಸರ್ಗದ ಚೇಷ್ಟೆಯು ಹೇಗಿದೆ.

## ತೃತೀಯಾಂಕ ಸಮಾಪ್ತ



# ೪ನೆಯ ಅಂಕ

## ೧ನೆಯ ಪ್ರವೇಶ

**ನಾಗಾಭಟ್ಟ**— ಇದೆಂತಹ ವಿಚಿತ್ರವಾದ ಹುಚ್ಚು ! ಆ ಮಾಧವರಾಯನ ಹೆಂಡತಿಯಾದ ಮನೋರಮಾಬಾಯಿಯು ನನ್ನ ಮಗನಾದ ಭಗೀರಥನನ್ನೇ ಕಾಡುವದೇಕೆ ? ಪಾಪ, ಹುಡುಗ, ನಡುಗಿ ಹೋಗಿದ್ದಾನೆ. ನೋಡಿ !

**ಹಿರಣ್ಯ**— ಸ್ವಾಮಿ, ಏನು ಹೇಳಲಿ, ಆ ಹೆಣ್ಣು ಮಗಳ ಅರ್ಭಾಟ ! ನಿನ್ನೆ ಬೀದಿಯಲ್ಲಿ ಅವನನ್ನು ಹಿಡಿದವಳೇ ಹೊಲತಿಯು ಹೊಲೆಯನನ್ನು ಕರೆಯುವಂತೆ "ಬಾರೊ, ಊರ ಬೀದಿಗಳನ್ನುಡುಗುವಾ" ಎಂದು ನಡಿಸಿದಳು ಜಗ್ಗಾಟಾ!! ನೆರೆದ ಜನವೆಲ್ಲವೂ ಹೇಳಿತು; ಆದರೆ ಆಕೆಯಲ್ಲಿ ಕೇಳುತ್ತಾಳೆ ? ಕೊನೆಗೆ ಅವಳ ಕೈಯಿಂದ ಪಾರಾಗಿ ಹೋಗಬೇಕಾದರೆ ಭಗೀರಥನಿಗೆ ಭಗೀರಥ ಪ್ರಯತ್ನವನ್ನೇ ಮಾಡಬೇಕಾಯಿತು !

**ನಾಗಾ**— ಹೀಗಾದರವನ ಪರಿಣಾಮವೇನು, ಸ್ವಾಮಿ ? ನಾಲ್ಕು ಜನರಲ್ಲಿ ತಿರುಗಾಡುವವ; ಈ ದೆವ್ವ ಹಾದಿ ಬೀದಿಗಳಲ್ಲಿ ಜಗ್ಗಾಟ ನಡಿಸಿ ಅಪಮಾನ ಮಾಡಿದರೆ ? ಈಗ್ಗೆ ಒಂದು ತಿಂಗಳಿನಿಂದ ಹುಡುಗ ಮನೆಯಿಂದ ಹೊರಬೀಳಲಿಕ್ಕೆ ಕಳ್ಳನಾಗಿ ಬಿಟ್ಟಿದ್ದಾನೆ !

**ಹಿರಣ್ಯ**— ಅವಳ ಹುಚ್ಚು ಮಾತ್ರ ನಿಜವಾದದ್ದಲ್ಲವಾಗಿ ಕಾಣುತ್ತೆ! ಯಾಕಂದರೆ, ಮಿಕ್ಕ ಜನಗಳಿಗೆ ಅವಳ ತಾಪವೇ ಇಲ್ಲ; ಅದಕ್ಕೆ ಬದಲಾಗಿ ಪ್ರಯೋಜನವೇ ಇದೆ !

**ನಾಗಾ—** ಅಂತೆ, ಸ್ವಾಮೀ ನನ್ನ ಮಾತನ್ನು ಯಾರೂ ಅನುಮೋದಿಸಲೊಲ್ಲರು. ಊರ ಮುಖಂಡರು ಒಪ್ಪಿದ್ದರೆ ಇಷ್ಟು ಹೊತ್ತಿನಲ್ಲವಳು ಧಾರವಾಡದ ಹುಚ್ಚರಾಸ್ಪತ್ರಿಯನ್ನು ಕಾಣುತ್ತಿದ್ದಳು !!

**ಹಿರಣ್ಯ** - ಅದೇನೊ ನಿಜ. ಮುಂಜಾವಿನಿಂದ ಸಾಯಂಕಾಲದವರೆಗೂ ಒಂದೇ ಸವನೆ ಬೀದಿಗಳನ್ನುಡುಗುವದರಲ್ಲಿಯೇ ತೊಡಗಿರುತ್ತಾಳೆ. ಮುನಸೀಪಾಲಟಿಯು ಊರುಗಳಿಗಿಂತಲೂ ನಮ್ಮ ಗ್ರಾಮವನ್ನು ಚೊಕ್ಕಟವಾಗಿರಿಸಿದ್ದಾಳೆ! ಅನಾಯಾಸವಾಗಿ ಕಾಸಿಲ್ಲದೆ ಸೇವೆಯನ್ನು ಮಾಡುವ ಇಂತಹ ಸ್ವಯಂಸೇವಿಕೆಯನ್ನು ಯಾರು ತಾನೆ ದೂರಮಾಡಲಪೇಕ್ಷಿಸುವರು ? ಅಗೋ ನೋಡಿ, ಜಗ್ಗಾಟಾ ಮಧ್ಯದಲ್ಲಿ ನಮ್ಮ ಸೊಸೆಯೂ ಇದ್ದಾಳೆ. ಪಾಪ! ತಮ್ಮನಿಗೆ ಗಂಟುಬಿದ್ದ ಉಪಾಧಿಯನ್ನು ತಪ್ಪಿಸುವದೇ ಅವಳ ಸಾಹಸವೆಂದು ಕಾಣುತ್ತೆ ! ಪ್ರಕರಣವು ಇತ್ತವೇ ಬಂತಲ್ಲಾ ! (ರಾಧಾಬಾಯಿಯು ತಮ್ಮನನ್ನು ಮೇಲುಗಟ್ಟುವಳು ಮನೋರಮಾ ನಿರ್ಭತ್ಸನೆ ಮಾಡುತ್ತಿರುವಂತೆ)

**ಮನೋ—** ಹುಚ್ಚುಲಿಂಗದ ಹಣೆಯಮೇಲೆ ಗಂಧವನ್ನು. ಅಸ್ಪೃಶ್ಯರಾದ ನಾವು ಹಾಗೆ ವರ್ತಿಸುವದೆಂದರೆ ಉಚ್ಚವರ್ಣದ ಅಪಮಾನ. ಅಳಿಸಿಕೋ ತೀವ್ರ ಅದನ್ನು. ಇಲ್ಲವಾದರೆ ನೋಡು. ಈ ಬೋರಿಗೆಯಿಂದ ಹಣೆಯನ್ನು ತಿಕ್ಕಿಬಿಟ್ಟೇನು !

**ರಾಧಾ—** ಏನಿದು, ಮನೋರಮಾಬಾಯಿ ? ಊರಲ್ಲಿ ನಿಮಗೆ ಮತ್ತಾರೂ ಸಿಗುವದಿಲ್ಲವೆ ? ನನ್ನ ತಮ್ಮನನ್ನು ಕಾಡುವಿರೇಕೆ ?

**ಮನೋ—** ತಾಯೀ, ನಾನಿವನನ್ನು ಎಂದೂ ಕಾಡಿಲ್ಲ; ಮತ್ತು ಕಾಡುವದೂ ಇಲ್ಲ. ಸ್ವಕರ್ತವ್ಯದ ಸಲುವಾಗಿ ಇವನಿಗೆ ಎಚ್ಚರಿಕೆಯನ್ನು ಕೊಡುತ್ತಲಿದ್ದೇನೆ. ತಾನು ನಿಜವಾದ ಅಸ್ಪೃಶ್ಯನಾಗಿ ಉಚ್ಚವರ್ಣದವರೊಡನೆ ಬಳಿಕೆಯನ್ನು ಮಾಡುವದೆಂದರೇನು ? ಒಂದು ದಿನವಾದರೂ ಬೀದಿಯನ್ನುಡುಗಲಿಕ್ಕೆ ಬಂದಿರುವನೆ ?

**ರಾಧಾ—** ನಿಮಗೊಂದು ಹುಚ್ಚು ಹಿಡಿದದೆ ಎಂದು ಹಾಗೆ ಮಾಡುವಿರಿ; ಇವನೇಕೆ ಹಾಗೆ ಮಾಡಹೋದಾನು ?

**ಮನೋ—** ಹಾಗವನು ಮಾಡದಿದ್ದರೆ ನಾನೆಲ್ಲಿ ಬಿಡುವೆನು ? ಅಂ ?

**ಭಗೀರಥ**— ಮನೋರಮಾಬಾಯೀ—

**ಮನೋ**— ನೀನು ಹಾಗೆ ಹೇಳಬೇಡ. ಅವು ಅಸ್ಪೃಶ್ಯರ ವಾಡಿಕೆಯಲ್ಲ. ಮನ್ನೀ, ಮನ್ನೀ, ಎಂದು ಹೇಳು. ನಾನಾದರೂ, ನಿನಗೆ ಭಗ್ಯಾ, ಭಗ್ಯಾ, ಎಂದು ಕರೆಯುವೆನು. ರಾಧಮ್ಮನವರೆ, ತಾವು ಹೆದರಬಿಡಿ ನನಗೆ! ಎಲಾ ಭಗ್ಯಾ, ಪ್ರಾರಂಭಿಸು ಉದ್ಯೋಗವನ್ನು (ಕೈಯಲ್ಲಿ ಪೊರಕೆ ಕೊಟ್ಟು ಗುಡಿಸೆಂದು ಹೇಳುವಳು)

**ನಾಗಾ**— (ಸಿಟ್ಟಿನಿಂದ ಬಂದು) ಏ ಹುಚ್ಚಮುಂಡೆ ನ ऽऽऽ

**ಮನೋ**— ಅಂದರೇನು, ನಿಮಗೇನೇ ಬ್ರಾಹ್ಮಣರಿಂದು. ರಾಧಮ್ಮನವರೆ, ನೋಡಿ, ಭಗ್ಯನು ಅಸ್ಪೃಶ್ಯಳಾದ ನನ್ನ ಕುಲವಾಗಿ ಹೇಗೆ ಹೇಳಿದರು? ನೀವು ಹಾಗೆ ಮಾಡಲಿಲ್ಲಾ! ನನ್ನನ್ನು ಮನೋರಮಾಬಾಯೀ ಎಂದು ಕರೆದಿರಿ; ಆದ ರಿಂದ ನನಗೆ ಎತ್ತೆತ್ತ್ಯೋ ಆಯಿತು! ಬೈಗಳ ಉಪಪದವಿಲ್ಲದೆ ಕರೆದಷ್ಟು ನಮ್ಮಂಥ ನಿಜವಾದ ಅಸ್ಪೃಶ್ಯರಿಗೆ ಸಹನವಾಗುವದಿಲ್ಲ. ಅನ್ನಿ ಸ್ವಾಮಿ, ಅನ್ನಿ! ನೀವನ್ನತಕ್ಕವರು; ನಾವನಿಸಿಕೊಳ್ಳತಕ್ಕವರು! ಯಾಕಲಾ, ಭಗ್ಯಾ, ನಾನು ಹೇಳುವದು ಯಥಾರ್ಥವಲ್ಲವೆ?

**ರಾಧಾ**— ಅಪ್ಪಾ, ಸುಮ್ಮನಿರು. ಈ ಹೆಣ್ಣುಮಗಳನ್ನು ತಡವುವದು ಹೇಸಿ ಕೆಯ ಮೇಲೆ ಕಲ್ಲೊಗೆಯುವದೂ ಒಂದೇ!

**ಮನೋ**— ಹೇಸಿಕೆಯ ಮೇಲೆ ಕಲ್ಲೊಗೆದರೆ ಅದು ಹಾರಿ ಮೈಗೆ ಸಿಡಿ ಯುವದು. ಹಾಗೆ ನಾನೇನಾದರೂ ತಮಗೆ ಹೇಸಿಮಾತುಗಳನ್ನಾಡಿದನೆ? ರಾಧಮ್ಮನವರೆ ತಮ್ಮ ವಿಧಾನವು ಸರಿಯಾಗಲಿಲ್ಲಾ! ಸ್ವಾಮಿ, ತಡವೇಕೆ ಆ ಭಗ್ಯನನ್ನು ಬಿಟ್ಟುಕೊಡಿ. ಊರಲ್ಲಿ ಕಸಬಳಿಯುವ ಕೆಲಸಗಳು ಬಹಳ ಇವೆ! (ಅವನ ಕೈ ಹಿಡಿದು ಹೋಗುವಳು)

**ನಾಗಾ**— ಹುಚ್ಚಮುಂಡೇಗಂಡಾ—

**ಮನೋ**— ಯಥಾರ್ಥವಾಗಿ ಹೇಳಿದಿರಿ.

**ನಾಗಾ**— ಹೆಂಗಸಿನಂತೆ ಮುಖ ಜೋಲುಹಾಕಿ ನಿಂತಿರುವಿ; ಕೊಡಬಾರದೇ ಎರಡು ಕೆನ್ನೆಗೆ, ತಿರುಗಿ ಅವಳು ನಿನ್ನ ಹೆಸರೆತ್ತುವಂತೆ?

**ಮನೋ**— ಏನೆಲೊ? ಹಾಗೆ ಮಾಡುವಿಯಾ? (ಭಗೀರಥ ಸುಮ್ಮನೆ ನಿಲ್ಲುವನು)

**ಹಿರಣ್ಯ**— ನಾಗಾಭಟ್ಟರೆ, ಮುಂದೇನೂ ಅಂದೆ?

**ಮನೋ**— ನಡೆ ತೀವ್ರ!

**ಪದ್ಮನಾಭ**— ಏನಿದನಾಹುತವು? ಮನೋರಮಾಬಾಯಿಯವರೆ,

**ಮನೋ**— ಓಹೊ, ಆಚಾರ್ಯರೆ, ಅಸ್ಪೃಶ್ಯರ ಸಲುವಾಗಿ ಇಂತಹ ಆದರೋಕ್ತಿಗಳೆ? ಮನೋರಮಾಬಾಯಿಯವರೇ! ಛೀ, ಹಾಗೆ ಹೇಳಕೂಡದು ಸ್ವಾಮಿ.

**ಪದ್ಮ**— (ಸ್ವಗತ) ಅಯ್ಯೋ, ಹೆಣ್ಣುಮಗಳ ತಲೆ ಕೆಟ್ಟುಬಿಟ್ಟದೆ!

**ಮನೋ**— ಊರಲ್ಲಿ ಬೀದಿಗಳನ್ನುಡುಗಲಿಕ್ಕೆ ಬಾರೆಂದರೆ ಈ ಭಗ್ಯಾ ಬರಲೊಲ್ಲನು.

**ಪದ್ಮನಾಭ**— ಈಗ್ಗೆ ಬಿಟ್ಟುಬಿಡಿರಿ. ನಾಳಿನಿಂದವಗನ್ನು ಕರೆದುಕೊಂಡು ಹೋಗುವಿರಂತೆ.

**ಮನೋ**— ಆಚಾರ್ಯರ ಹೇಳಿಕೆಗಾಗಿ ಬಿಟ್ಟುಹೋಗುವೆನು. ನಾಳಿನಿಂದ ನೀನು ನಮ್ಮ ಗ್ರಾಮದ ಸ್ಯಾನಿಟೇಶನ್ ಕಾರ್ಯವನ್ನು ಕೈಕೊಳ್ಳದಿದ್ದರೆ, ನೋಡು, ಹೇಗಿದೆ? (ಚೋರಿಗ ತೋರಿಸಿ) ಬೆನ್ನಿಗೆ ಇದರ ಪೆಟ್ಟುಗಳು ಒಂದಾವು. (ಸರ್ರನೇ ಹೋಗುವಳು)

**ಪದ್ಮನಾಭ**— ಏನು, ಭಗೀರಥ ಭಟ್ಟರೆ, ನಿಮ್ಮ ಅತ್ತಿಗೆಮ್ಮನವರು ಹೀಗೇಕೆ ನಿಮ್ಮನ್ನು ಕಾಡುವರು?

**ಭಗೀರ**— ಆಚಾರ್ಯರೇ, ಮಾಡುವದೇನು? ನನ್ನ ಪ್ರಾರಬ್ಧ!

**ಪದ್ಮನಾಭ**— ಈ ಹೆಣ್ಣುಮಗಳ ಹುಚ್ಚು ಊರಲ್ಲಿ ನಿಮ್ಮೊಬ್ಬರಹೊರತು ಮತ್ತಾರಿಗೂ ಬಾಧಕವಾಗಿಲ್ಲ. ಇದರರ್ಥವೇನು?

**ಭಗೀರಥ**— ನಾನೀ ಹೆಣ್ಣುಮಗಳ ದುರಾಚಾರಗಳಿಗೆ ಒಪ್ಪದೆ ಇದ್ದದ್ದೇ ಇದರ ಕಾರಣವು!

**ನಾಗಾ—** ನೋಡಿ, ಹಿರಣ್ಯಗರ್ಭಾಚಾರ್ಯರೆ, ನೀತಿವಂತ ತರುಣರ ಸುತ್ತು ಎಷ್ಟು ತಾಪಗಳಿವೆ ನೋಡಿದಿರಾ !

**ಹಿರಣ್ಯ—** ಅದೆಲ್ಲವಾಯಿತು. ಭಗೀರಥಭಟ್ಟರನ್ನು ಹಿಂಬಾಲಿಸಿದ ಈ ಉಸಾಧಿಯನ್ನು ಹೇಗೆ ತಪ್ಪಿಸಬೇಕು ?

**ರಾಧಾ—** ಏನಾದರೂ ಮಾಡಿರಿ. ಎಲ್ಲರೂ ಸೇರಿ ನನ್ನ ತಮ್ಮನಿಗೆ ಗಂಟು ಬಿದ್ದ ಈ ದೆವ್ವ ಬಿಡಿಸಿರಿ. ಇಷ್ಟೇ ಹೇಳುವದು !

**ಪದ್ಮನಾಭ—** ನಡೆಯಿರಿ; ಬೀದಿಯಲ್ಲೇಕೆ ? ಮನೆಯಲ್ಲಿ ಕುಳಿತು ಈ ವಿಷಯವಾಗಿ ಆಲೋಚಿಸುವಾ ! (ಹೋಗುವರು)

---

# ೨ನೆಯ ಪ್ರವೇಶ

**ಶಾರದಾ—** ಹೇಗೆ ಮಾಡಲಿ ? ಭಗೀರಥ ಭಟ್ಟನನ್ನು ವರಿಸುವದಕ್ಕಾಗಿ ಈ ಮಗುವಾದ ಕಮಲೆಯ ಮನವನ್ನು ಹೇಗೆ ಒಲಿಸಲಿ ! ಇವಳು ನನ್ನ ವಿಷಯದಲ್ಲಿ ಕೇವಲ ಆದರಭಾವವುಳ್ಳವಳೆಂದು ಎಲ್ಲರೂ ನನ್ನ ಪಾಲಿಗೆ ಈ ಕೆಲಸವನ್ನೊಪ್ಪಿಸಿದ್ದಾರೆ! ಆದರೆ ನನ್ನಿಂದೀಕಾರ್ಯವಾಗುವ ಲಕ್ಷಣವಿಲ್ಲಾ. ಆ ಮಗು ಕೇವಲ ನಮ್ಮಣ್ಣನ ಗುಣದವಳು ! ಔದಾರ್ಯಭಾವವು ಅವಳ ಹುಟ್ಟುಗುಣವಾಗಿದೆ. ನನ್ನ ಮಗುವಾದ ಕುಮಾರನ ಹವ್ಯಾಸ ತರವಲ್ಲ; ನಮ್ಮ ನಿಮ್ಮ ಗೋತ್ರಗಳು ಕಲೆಯುವದಿಲ್ಲವೆಂದು ಅವಳಿಗೆ ಬಹುವಾಗಿ ಹೇಳಿದೆನು. ಆದರೆ ಅವಳೇನು ಕೇಳುವದಿಲ್ಲ. ಮಾಡಿಕೊಂಡರೆ ಕುಮಾರನನ್ನೇ ಮದುವೆಯಾಗುವೆನು; ಇಲ್ಲವೆ ಹಾಗೇ ಉಳಿಯುವೆನೆಂತಲೂ ಹೇಳುತ್ತಿರುವಳು ! ಅವಳ ವಿಚಾರವು ವಿಹಿತವಾಗಿದ್ದರೂ ಅದು ಹೇಗೆ ನೆರವೇರಬೇಕು ? ಕುಮಾರನು ಪುನರ್ವಿವಾಹಿತಳಾದ ನನ್ನ ಮಗನಲ್ಲವೆ ! ಈ ರಾಕ್ಷಸೀರೂಢಿಯು ಅದಕ್ಕೆ ಹೇಗೆ ಸಮ್ಮತಿಯನ್ನು ಕೊಟ್ಟೀತು ? ಗರ್ಭಪಾತ ಬಾಲಹತ್ಯಾದಿಗಳನ್ನು ಪರ್ಯಾಯದಿಂದನು

ಮೋದಿಸುವ ಕುಟಿಲಗತಿಯ ಸಮಾಜಕ್ಕೆ ಪುನರ್ವಿವಾಹದಂಥ ಸರಲ ವಿಚಾರವು ಹೇಗೆ ರುಚಿಸ ಬೇಕು ? ಆಗಲಿ; ಭಗೀರಥಭಟ್ಟನ ವಿಷಯವಾಗಿ ಕಮಲೆಗೆ ನಾಲ್ಕು ಮಾತುಗಳನ್ನು ಹೇಳುವ ಕೊನೆಯ ಪ್ರಯತ್ನವನ್ನು ಈ ಜನರ ಸಲುವಾಗಿಯಾದರೂ ಮಾಡುವಾ!

---

## ೩ನೆಯ ಪ್ರವೇಶ

**ಭಗೀರ—** ಇದೊ, ಕಮಲೆ, ಹೆಚ್ಚಿನ ಚೇಷ್ಟೆಯು ತರವಲ್ಲ! ನೀನು ನಮ್ಮಕ್ಕನ ಹೊಟ್ಟೆಯಿಂದ ಹುಟ್ಟಿ ಬಂದಾಗಲೆ ನನ್ನ ಹೆಂಡತಿಯಾಗಿ ಹುಟ್ಟಿ ಬಂದಿರುವಿ! ಹೀಗಿರಲು ನನ್ನನ್ನು ಮದುವೆಯಾಗುವದಿಲ್ಲವೆಂದರೆ ಕೇಳೇನೇ !

**ಕಮಲಾ—** ಎಂತಹ ಲಜ್ಜೆಗೇಡಿಯೊ ನೀನು ? ಆಗಲಾಗಲಿ ! ಹೆಂಡತಿ ಹೆಂಡತಿಯೆಂದು ಬಾಯಿ ಭೋಗವನ್ನಾದರೂ ತೀರಿಸಿಕೊ ಹೋಗು ! (ಹೋಗಲುದ್ಯುಕ್ತ)

**ಭಗೀರ—** (ಅವಳನ್ನು ಸ್ವಲ್ಪ ತಡೆದು) ಏ, ಸ್ವಲ್ಪನಿಲ್ಲೆ.

**ಕಮಲಾ—** (ಅವನ ಮುಖಕ್ಕೆ ಬಿಗಿದು) ಸರಿ ನನ್ನನ್ನು ಮುಟ್ಟಬೇಡ ! ಲಗ್ನವಾಗುವತನಕ ನನ್ನನ್ನು ಮುಟ್ಟುವದೇಕೆ ? ನೀನೆಂಥ ಬ್ರಹ್ಮಚಾರಿಯೊ ? ನಾನು ನಿನ್ನಕ್ಕನ ಮಗಳಾದ ಮಾತ್ರಕ್ಕೇನಾಯಿತು ? ರೀತಿಗಳನ್ನು ಬಿಟ್ಟು ನಡೆಯಬೇಕೇನು ?

**ಭಗೀರ—** ಅಬ್ಬಾ! ಏನು ಬಡಿವಾರವೇ ? ಇಂದಿಲ್ಲ ನಾಳೆಗಾದರೂ ನೀನು ನನ್ನ ಹೆಂಡತಿಯಾಗತಕ್ಕವಳೇ !

**ಕಮಲಾ—** ಆದಾಗ್ಗೆ ನೋಡಿಕೊಳ್ಳುವಾ ! ಜಿಲ್ಲಿಯತನಕ ನಿನ್ನನ್ನು ಕಣ್ಣೆತ್ತಿ ನೋಡುವದು ಸಹ ನನಗೆ ಬೇಡಾ !

**ಭಗೀರಥಾ—** ಹುಂ ಹುಂ; ನನ್ನಂಥವನನ್ನು ನೀನು ಹೇಗೆ ಕಣ್ಣೆತ್ತಿ ನೋಡೀ? ಕುಲಹೀನ ಕುಮಾರನಂಥವನಾಗಿದ್ದರೆ ಮಾತ್ರ ನೋಡುತ್ತಿದ್ದೆಯಲ್ಲವೆ ?

**ಕಮಲಾ—** ಕುಲಹೀನ ? ಅವನು ಕುಲಹೀನನಾಗಿದ್ದರೆ ನೀನು ಶೀಲಹೀನ ನಿರಬಹುದು. ಹೀಗಿರಲು ಕುಲಹೀನ ಶೀಲಹೀನರಲ್ಲಿ ಹೆಚ್ಚುಕಡಿಮೆಯೆನ್ನೇನು ಹೇಳುವದು ?

**ಭಗೀರ—** ಅಬ್ಬಾ, ಹೀಗೆ ವ್ಯಾಖ್ಯಾನವನ್ನು ಕೊಡುವದಕ್ಕೆ ಆ ಆಶ್ರಮದಿಂದ ಬಂದ ಮಾತಾಬಾಯಿಯು ಕಲಿಸಿದಳೇನೆ ? ಸದಾ ಸೌಭಾಗ್ಯವತಿಯು ?

**ಕಮಲಾ—** (ಸಿಟ್ಟಿನಿಂದ) ಏನು? ಏನೆಂದು ಹೇಳಿದೆ ? ಮಾತಾಬಾಯಿಯು ಸದಾಸೌಭಾಗ್ಯವತಿಯು ? ಹೇಳು ಹೇಳು ? ಏನೆಂದು ಹೇಳಿದೆ ?

**ಭಗೀರ—** ಮಾತಾಬಾಯಿಗೇ ಸದಾಸೌಭಾಗ್ಯವತಿಯೆಂದು ಹೇಳಿದೆನು. ಮತ್ತೇನು ? ಊರೆಲ್ಲಿಯೋ? ಮನೆಮಾರುಗಳೆಲ್ಲೋ ? ಗಂಡನೆಲ್ಲೋ ? ಸುಮ್ಮನೆ ಹಣೆಯಲ್ಲಿ ಕುಂಕುಮ ಮಾತ್ರವಿದೆ, ವೃದ್ಧಾನಾರೀ ಪತಿವ್ರತಾಯೆನ್ನುವಂತೆ ! ಇಂತಹ ವ್ಯಕ್ತಿಗಳಿಗೆ ಸಮಾಜದಲ್ಲಿ ಮಾನ್ಯತೆಯನ್ನು ಪಡೆಯುವದಕ್ಕೆ ಈ ದೇಶ ಸೇವಿಕೆಯರ ಸೋಗು ಒಳಿತಾಗಿ ಸಿಕ್ಕಿದೆ.

**ಕಮಲಾ—** ಭಗೀರಥಾ, ನೀನು ನಿನ್ನ ದೃಷ್ಟಿಯಿಂದ ಜಗವನ್ನು ನೋಡುವಿ. ಯೋಗ್ಯವಿದೆ ! ನಿನಗಾದರೂ ಈ ಸೋಗು ಏತಕ್ಕೆ ಬೇಕು ? ಮನೋರಮಾ ಬಾಯಿಯು ಹೇಳುವ ವೇಷವೇ ನಿನಗೊಪ್ಪುವದೆಂದು ನನ್ನ ತರ್ಕವಾಗಿದೆ. ನೀನಿಂತಹ ಹೇಸಿಮನಸ್ಸಿನವನೆಂದು ನನಗೆ ಗೊತ್ತಾಗಿದ್ದರೆ ಸೋದರಮಾವನೆಂಬ ದಾಕ್ಷಿಣ್ಯವನ್ನು ಕೂಡಾ ಇಡದೆ ನಿನ್ನ ನೆರಳಿಗೆ ಸಹ ನಾನು ಹೆದರುತ್ತಿದ್ದೆನು ! ಆಯಿತು. ಆದದ್ದೆಲ್ಲವೂ ಒಳಿತೆ! ಎಲ್ಲರೂ ಒಂದೇ ಸವನೆ ಹೇಳುವಾಗ್ಗೆ ನಿನ್ನನ್ನು ವರಿಸುವ ವಿಷಯಕವಾಗಿ ಕದಾಚಿತ್ ನನ್ನ ಮನವು ಒಪ್ಪುವ ಸಂಧರ್ಭವಿತ್ತು. ಇನ್ನು ಮಾತ್ರ ತ್ರಿಮೂರ್ತಿಗಳು ಪ್ರತ್ಯಕ್ಷವಾಗಿ ಬಂದು ಹೇಳಿದರೂ ಕೇಳೆನು. (ಹೋಗುವಳು)

**ಭಗೀರಥ—** ನಿಲ್ಲು. ಅಪ್ಪಣೆಯಿಲ್ಲದೆ ಎತ್ತ ಹೋಗುವಿ ? ಇಷ್ಟು ಜಂಭ ಕೊಚ್ಚುವ ನಿನ್ನನ್ನು ಮದುವೆಯಾಗದೆ ಬಿಟ್ಟರೆ ಹುಟ್ಟಬೇಕೆ ? ಕಟ್ಟಿಹಾಕಿ ಲಗ್ನವನ್ನು ಮಾಡಿಕೊಳ್ಳುವೆನು. ಏನೆಂದು ತಿಳಿದೆ ? ಏ, ಹೊಯಿಮಾಲಿ ! (ಗದ್ದವನ್ನು ಹಿಡಿಯ ಹೋಗುವನು.)



**ಕುಮಾರ.** **ಕಮಲಾ.** **ಭಗೀರಥ.**

**ಕುಮಾರ:**—ಹೀಗೆ ಕಮಲೆಯನ್ನು ಹಿಡಿದುಬಿಟ್ಟೆನು.

[ ಪುಟ. ೭೯

**ಕುಮಾರ** — ಓಹೋ.

(ಎಂದು ಸರಿಮನೆಯ ಹಂಚಿಕೆಯಿಂದ ಇಬ್ಬರ ನಡುವೆ ಹಾದು ಪಾರಾಗುವನು. ಕಮಲಾ ನಗುವಳು)

**ಭಗೀರಥ**— ಶುದ್ಧ ಕತ್ತೆಯಾಗಿರುವಿ !

**ಕುಮಾರ** — ಭಟ್ಟರೆ, ಆ ಕತ್ತೆಯಷ್ಟು ಸಹನಶೀಲನಾಗುವ ಯತ್ನದಲ್ಲಿದ್ದೇನೆ; ಇನ್ನೂ ಪೂರ್ಣವಾಗಿಲ್ಲ !

**ಭಗೀರಥ**— ಏನು ಹೀಗೆ ಗಲಾಟೆಮಾಡಿದತಿ ಮಧ್ಯದಲ್ಲಿ ಬಂದು ?

**ಕುಮಾರ**— ನೀವಿಬ್ಬರೂ ಸರಿಮನೆಯನ್ನು ಆಡುತ್ತಿರುವಂತೆ ಕಂಡಿತು ! ಕಮಲೆಯು ಉಪ್ಪು ಒಯ್ಯುವಂತೆಯೂ ನೀವದನ್ನು ತಡೆಯುವಂತೆಯೂ ಕಂಡಲಕ್ಷಣವೇ, ಮೋನಲೈನಿನಲ್ಲಿರುವ ಹಿರೇ ಹುಮ್ಮಸ್ಸಿನ ಆವೇಶವು ನನ್ನಲ್ಲಿ ಬಂದು ಬಿಟ್ಟಿತು. ಆಗ್ಗೆ ಕೇಳುವದೇನು ? ಸರ್ರನೇ ಹೊರಟಿದ್ದೆ ಹೊರಟಿದ್ದೇ ಹೀಗೆ ಕಮಲೆಯನ್ನು ಬಿಡಿಸಿ ಬಿಟ್ಟೆನು. ನಿಮ್ಮ ಉದ್ದೇಶವನ್ನು ನಾನು ಕೊನೆಗಾಣಿಸಿದಂತಾಗಲಿಲ್ಲವೆ ?

**ಕಮಲಾ**— ಕುಮಾರ, ನಿಜವಾದದ್ದನ್ನು ಹೇಳಿದೆ. ಭಗೀರಥನ ಗುರಿಯನ್ನು ನೀನು ಸಾಧಿಸಿದೆ. ಜಯಶಾಲಿಯಾದ ನಿನಗೆ ನಾನು ಮನಃಪೂರ್ವಕ ಥ್ಯಾಂಕ್ಸ ಕೊಡುವೆನು.

**ಕುಮಾರ**— ನಡೆ ಕಮಲಾ, ಮಾತಾ ಕರೆಯುವಳು ! (ಇಬ್ಬರು ಕೈ ಕೈ ಹಿಡಿಕೊಂಡು ಹೋಗುವರು)

**ಭಗೀರಥ**— (ಚಡಪಡಿಸುತ್ತ) ಎಲೇ ಕುಮ್ಯಾ. ಇನ್ನು ನನಗಿದೆ ನಿನಗಿದೆ ! ಬಾ, ಮಗನೆ ! ಅನಾಮಧೇಯನಾದ ನೀನು ನನ್ನ ಕಣ್ಣೆದುರಿನಲ್ಲಿ ನನ್ನ ಭಾವೀ ಪತ್ನಿಯ ಕೈಯನ್ನು ಹಿಡಿದು ಎಳೆದೊಯ್ದೆಯಾ ? ಸಿಂಹನ ಭಾಗವು ನರಿಗೆ ದಕ್ಕೀತೇ ! ಬಾ ! ಮಗನೆ. ನಮ್ಮಿಬ್ಬರಲ್ಲಿ ಯಾರಾದರು ಒಬ್ಬರೂ ಮುಣುಗಲೇ ಬೇಕು ! ನನ್ನಲ್ಲಿ ತ್ರಾಣವಿಲ್ಲದಿದ್ದರೂ ನಿನ್ನ ಆಹುತಿಯನ್ನು ಸಹಜವಾಗಿ ತಕ್ಕೊಳ್ಳುವ ಯುಕ್ತಿಗಳಿಗೇನು ಕೊರತೆಯಿಲ್ಲಾ ! ಮಲಗಿ ನಿದ್ರಿಸುವಾಗಲೆ ನಿನ್ನನ್ನು

ತಿರುಗೇಳದಂತೆ ಮಾಡದಿದ್ದರೆ ನಾನು ನಾಗಾಭಟ್ಟರ ಮಗನೇ ಅಲ್ಲಾ ! ಹೋಗ ಹೋಗುತ್ತಾ ಕಮಲೆಯು ಹೆಗಲಮೇಲೆ ಕೈಹಾಕಿಕೊಂಡು ಹೋದದ್ದಲ್ಲವೇ ? ಅಬ್ಬಾ! ಆ ಸಮಯಕ್ಕೆ ಒಂದು ರಿವಾಲ್ವರ ಇರುತ್ತಿದ್ದರೆ ಹೇಳುತ್ತಿದ್ದೆ! ಮಾಡುವ ದೇನು ? ಸರಕಾರವು ಆರ್ಮ್ಸ ಆಕ್ಟಮಾಡಿ ನಮ್ಮಂಥವರ ಕೈ ಕಟ್ಟಿಹಾಕಿ ಬಿಟ್ಟಿದೆ ! ಆದರೂ ಪರವಿಲ್ಲಾ ! ಜರ್ಮನಿಯವರು ಗ್ಯಾಸಿನಿಂದ ಮನುಷ್ಯರನ್ನು ಕೊಲ್ಲುವಂತೆ ನಮ್ಮ ದೇಶದಲ್ಲಿಯು ಇಲಿಪಾಷಾಣ ಗೌರೀಪಾಷಾಣ ಶಂಖ ಪಾಷಾಣಗಳಂಥ ತೀವ್ರ ಸಂಹಾರೀ ವಿಷಗಳಿವೆ. ಅವುಗಳಿಂದ ನಿನ್ನನ್ನಿಕ್ಕರಿಸಿ ಹಾಕುವೆನು. ಇದೇ ನನ್ನ ಪ್ರತಿಜ್ಞೆ ! ಇದೇ ಈ ನಾಗಾಭಟ್ಟನ ಮಗನಾದ ಭಗೀರಥನ ಭೀಷ್ಮಪ್ರತಿಜ್ಞೆ ! (ಹೋಗುವಾ)

---

# ೪ ನೆಯ ಪ್ರವೇಶ

**ನಾಗಾ**— ಒಳ್ಳೇ ಮಾಟಗಾರ್ತಿ ! ಹಿರಣ್ಯಗರ್ಭಾಚಾರ್ಯರ ಮನೆಯ ಜನ ಗಳನ್ನೆಲ್ಲಾ ತನ್ನ ಜಾಲದಲ್ಲೆಳೆದು ಬಿಟ್ಟಿದ್ದಾಳೆ! ಅದರಲ್ಲಿ ಜಹಗೀರದಾರ ಮಾಧವ ರಾಯನ ಮಹಾರೋಗವು ನಿವಾರಣೆಯಾದ ಮೇಲಂತೂ ಅವಳನ್ನು ಈ ಜನ ರೆಲ್ಲರೂ ಅಶ್ವಿನೀದೇವತೆಯೆಂದು ಭಾವಿಸುತ್ತಲಿದ್ದಾರೆ ! ಗುಣವಿರಬಹುದು; ರೂಪವಿರಬಹುದು; ಅಷ್ಟು ಮಾತ್ರಕ್ಕೆ ಸಿಕ್ಕವರಿಗೆ ಮಕ್ಕಳನ್ನು ಕೊಟ್ಟು ಮದುವೆ ಮಾಡುವಾಲೋಚನೆಯನ್ನು ಮಾಡಬೇಕೇನು ? ಇವರು ಒಪ್ಪತ್ತಿಗೆ ಮರುಳಾಗಿ ಹಾಗೆ ವಿಚಾರವನ್ನು ಮಾಡಿದರೆ, ದೇಶಬಿಟ್ಟು ಎದ್ದುಬಂದ ತಾನಾ ದರೂ ಏತಕ್ಕೆ ಸಮ್ಮತಿಯನ್ನು ಕೊಡಬೇಕು ? ತನ್ನ ಭೂಮಿಸೀಮೆಗಳೆಲ್ಲೋ; ಕುಲಗೋತ್ರಗಳೇನೋ ! ಸುಮ್ಮನೇ ಪರರ ಮಕ್ಕಳನ್ನು ಸವಿಮಾತುಗಳನ್ನಾಡಿ ಬಲೆಹಾಕುವದಿದೆಂತಹ ವಿಚಾರ ! ನೋಡುವಾ; ತನ್ನ ಮಗನ ಸಲುವಾಗಿ ಹೇಗೆ ನನ್ನ ಮೊಮ್ಮಗಳನ್ನು ಕೊಳ್ಳುವಳೋ ನೋಡುವಾ ! ಆ ಕಮಲೆಯನ್ನು ಭಗೀರಥನಿಗೆ ಕೂಡದಿದ್ದರೂ ಪರವಿಲ್ಲಾ. ಆ ಕುಮಾರನಿಗೆ ಮಾತ್ರ ಯಾವ

ಕಾಲಕ್ಕೂ ಕೊಡಗೊಡಲಿಕ್ಕಿಲ್ಲ! ಅಸ್ತು! ಈಗಲೇ ಆ ಮಾತಾಬಾಯಿಯನ್ನು ಕಂಡು ಈ ವಿಷಯವಾಗಿ ಅವಳಿಗೆ ಚನ್ನಾಗಿ ತಿಳಿಹೇಳುವಾ! ನನ್ನ ಮಾತುಗಳಿಗವಳು ಒಪ್ಪದೆ ಒಂದಿರಲಿ, ಈ ಊರ ಬಿಟ್ಟು ಓಡಿಸಿ ಬಿಡದಿದ್ದರೆ ಹುಟ್ಟಬೇಕೇ ನಾಗಾಭಟ್ಟನಾಗಿ? ಅದಾಉ? ಅವಳ ಮಗು ಕುಮಾರ; ಬರೇ ಕುಮಾರನಲ್ಲ! ರಂಡ ಮುಂಡೆಯ ಮಗ ರಾಜಕುಮಾರ! ಎಲೊ ಕುಮಾರ, ನಿಮ್ಮ ತಾಯಿಯೆಲ್ಲಿ? ಏನು? ಮಾಧವರಾಯರ ಗುಡಿಸಿಲಿನಲ್ಲಿರುವಳೆ? ಮಾಧವರಾಯರ ಬೇನೆಯು ನೆಟ್ಟಗಾಗಿದೆ. ಮತ್ತೇಕೆ ಅವರ ಗುಡಿಸಿಲಿನಲ್ಲಿ ಈ ಅಮ್ಮನವರ ವಾಸ್ತವ್ಯ? ಏನವರ ಬೇಟೆಯನ್ನಾಡಿ ಜಹಾಗಿರದಾರತಿಯಾಗುವ ವಿಚಾರವಿರಲಿಕ್ಕಿಲ್ಲವಷ್ಟೆ? ಏನೀ ಉತ್ತರವೇಶದವರ ತಂತ್ರಗಳೋ ಏನೋ? ದಕ್ಷಿಣಕ್ಕೆ ಇಳಿದವರು ಒಂದು ದೊಡ್ಡ ಬೇಟೆಯನ್ನಾಡದೆ ಹೋಗುವದೇ ಇಲ್ಲಾ!

(ಮಾಧವರಾಯರ ಗುಡಿಸಿಲು— ಅಶ್ವತ್ಥ ಪ್ರದಕ್ಷಿಣೆಯನ್ನು ಮಾತಾಬಾಯಿಯು ಮಾಡುತ್ತಿರುವಳು. ಮಾಧವರಾಯರು ಈಝೀಚೇರಿನಲ್ಲಿ ವರ್ತಮಾನಪತ್ರ ಓದುವಂತೆ.)

**ನಾಗಾ**— ಓಹೋ, ಇವರು ಚನ್ನಾಗಿ ಇಲ್ಲಿ ಪ್ರಪಂಚವನ್ನೇ ಹೂಡಿ ಬಿಟ್ಟಿದ್ದಾರೆ. ಏನು ರಾಯರೆ, ಕ್ಷೇಮವೋ?

**ಮಾಧವ**— ಬನ್ನಿ ಸ್ವಾಮಿ; ಬಹುದಿನಗಳಲ್ಲಿ ಬರೋಣವಾಯಿತು?

**ನಾಗಾ**— ತಮ್ಮ ಪ್ರಕೃತಿಯು ನೆಟ್ಟಗಾದ ಮೇಲೆ ಕಂಡಿದ್ದಿಲ್ಲ. ಭೆಟ್ಟಿಯಾಗಿ ಹೋಗೋಣ ಎಂದು ಬಂದೆ. ಎಲ್ಲಾ ನೆಟ್ಟಗಿದೆಯಷ್ಟೆ?

**ಮಾಧವ**— ಇದೆಲ್ಲವೂ ಈ ಮಾತಾಬಾಯಿಯವರ ಅನುಗ್ರಹವು!

**ನಾಗಾ**— (ಸ್ವಗತ) ಬಾಯಿಯವರು ಮತ್ತೇನೇನು ಅನುಗ್ರಹಮಾಡಿರುವರೋ?

**ಮಾಧವ**— ಮತ್ತೇನು ವಿಶೇಷ?

**ನಾಗಾ**— ವಿಶೇಷವೇನೂ ಇಲ್ಲಾ. ಈ ನಿಮ್ಮ ಮಾತಾಬಾಯಿಯವರೊಡನೆ ಕೆಲಮಾತುಗಳನ್ನಾಡುವ ವಿಚಾರವಿದೆ!

**ಮಾಧವ**— ಅದೊ, ಅವರ ಅಶ್ವತ್ಥ ಪ್ರದಕ್ಷಿಣೆಯಾಯಿತು. ಈಗ್ಗೆ ಬರುವರು; ತಾಳಿ.

**ನಾಗಾ—** ಅಶ್ವತ್ಥ ಸೇವೆಯನ್ನೇಕೆ ಕೈಕೊಂಡಿದ್ದಾರೆ ?

**ಮಾಧವ—** ಅದನ್ನು ನಾನೇನು ಹೇಳಲಿ ?

**ಶಾರದಾ—** ಏನು ? ಭಟ್ಟರ ಆಗಮನ ಅಕಸ್ಮಾತ್ತಾಗಿದೆ ?

**ನಾಗಾ—** ಹೀಗೇ; ತಮ್ಮಲ್ಲೊಂದು ಕೆಲಸವಿತ್ತು.

**ಶಾರದಾ—** ಅಗತ್ಯವಾಗಿ ಹೇಳಿ. ಏನದು ?

**ನಾಗಾ—** ತಾವು ನನ್ನ ಮೊಮ್ಮಗಳಾದ ಕಮಲೆಯನ್ನು ತಮ್ಮ ಕುಮಾರನ ಸಲುವಾಗಿ ತಕ್ಕೊಳ್ಳುವಾಲೋಚನೆಯನ್ನು ಮಾಡಿರುವಿರಂತೆ! ಅದೇನು ಸರಿಯಲ್ಲ. ಹೀಗೆ ಹಾರ ಗುಬ್ಬಿಗಳಾದ ನೀವು ನಮ್ಮಂಥ ಪ್ರಪಂಚಿಕರನ್ನು ಮೋಸಗೊಳಿಸ ಬಾರದು. ಏನೋ ದೊಡ್ಡವರ ವತಿಯಿಂದ ನಮ್ಮಲ್ಲಿಗೆ ಬಂದಿರುವಿರೆಂದು ಎಲ್ಲರೂ ನಿಮ್ಮೊಡನೆ ಗೌರವರದಿಂದ ನಡೆದುಕೊಂಡರೆ ಅದಕ್ಕೆ ಪ್ರತಿಯಾಗಿ ನೀವು ಈ ಮಾದರಿಯ ಸ್ವಾರ್ಥಸಾಧನೆಯ ಹಂಚಿಕೆಯನ್ನು ಹೂಡಬಾರದು.

**ಶಾರದಾ—** ನಾಗಾಭಟ್ಟರೆ, ಈ ಪ್ರಕರಣದಲ್ಲಿ ನನ್ನದೇನೂ ಅಂಗವಿಲ್ಲ. ನನ್ನ ಮಗನಿಗಂತೂ ಈ ವಿಷಯವೇ ಗೊತ್ತಿಲ್ಲ.

**ನಾಗಾ—** ಇದ್ದಿರಬಹುದು; ಪಾಪ ! ದೊಡ್ಡ ಆಶ್ರಮದ ಬ್ರಮ್ಹಚಾರಿಯಲ್ಲವೆ ? ನನ್ನ ಮೊಮ್ಮಗಳ ಜೊತೆಯಲ್ಲವನು ಮನಬಂದಂತೆ ವರ್ತಿಸುವನಂತೆ ! ಕೈ ಕೈ ಹಿಡಿದು ಹೋಗುವದೇನು ? ಹೆಗಲಮೇಲೆ ಕೈ ಹಾಕುವದೇನು ? ನಿಮ್ಮ ಮಗಳೊಡನೆ ಯಾವ ಯುವಕನಾದರೂ ಹೀಗೆ ಆಚರಿಸಿದ್ದರೆ ನಿಮಗೆ ಸರಿದೋರುತ್ತಿತ್ತೆ ? ಏಕೆ ? ರಾಯರೆ, ಪಕ್ಷಪಾತವಿಲ್ಲದೆ ಹೇಳಿ.

**ಶಾರದಾ—** ಕದಾಚಿತ್ ಆ ಮಗುವಿನೊಡನೆ ಕುಮಾರನು ಹಾಗೆ ವರ್ತಿಸುತ್ತಿದ್ದರೂ ಅದು ಅವನ ಸರಲ ವೃತ್ತಿಯ ಲಕ್ಷಣವಲ್ಲದೆ ಬೇರೆಯಲ್ಲ.

**ನಾಗಾ—** ಅವನು ಆ ಹುಡಿಗೆಯನ್ನು ಒಡಿಸಿಕೊಂಡು ಹೋದರೂ ನೀವು ನಿಮ್ಮ ಕುಮಾರನನ್ನು ಶುಕಮುನಿಯೆಂದೇ ಕೊಂಡಾಡತಕ್ಕವರು ! ಒಳ್ಳೇ ಜನಗಳು, ಅಮ್ಮನವರೆ ! ಬೆಕ್ಕು ಕಣ್ಣುಮುಚ್ಚಿಕೊಂಡು ಹಾಲು ಕುಡಿದರೂ ಪ್ರಪಂಚವು ಅದನ್ನು ನೋಡದೆ ಇದ್ದೀತೆ ?

**ಮಾಧವ** — ಭಟ್ಟರೇ, ಸ್ವಲ್ಪ ನಿದಾನ ನಿದಾನ !

**ನಾಗಾ** — ಏನು ರಾಯರೆ, ಬ್ರಹ್ಮಾಂಡಕ್ಕೆ ಬೇಗೆಹತ್ತಿದೆ. ಎರಡೂ ಮನೆ ತನಗಳು ಭ್ರಷ್ಟವಾಗತಕ್ಕ ಸಮಯ ! ಅಮ್ಮಾ ತಾಯಿ, ಇಲ್ಲಿಗೆ ತಾವು ಬಂದ ಕೆಲಸವಾಗಿದ್ದರೆ ತಣ್ಣಗೆ ನೀವು ನಿಮ್ಮ ದೇಶಕ್ಕೆ ಹೋಗುವದುತ್ತಮಾ !

**ಶಾರದಾ**— ಮಹಾತ್ಮರ ಕರೆಯು ಬಂದ ಬಳಿಕ ಒಂದರಕ್ಷಣ ಇಲ್ಲಿ ನಾವು ನಿಲ್ಲುವದಿಲ್ಲ.

**ನಾಗಾ**— ಪಾಪ ! ಅವರಿಗೆ ಬಹು ಅಗತ್ಯವಿದೆ ! ಕರೆಬರಬೇಕಂತೆ ಕರೆ ? ಮತ್ತೆಲ್ಲಿಗಾದರೂ ಊರೂರಿಗೆ ನೂಲು ಕಲಿಸುತ್ತ ಹೋಗಬೇಕು ? ಆ ಮಹಾತ್ಮ ರೇನು ನಿಮ್ಮನ್ನು ಕಟ್ಟಿಹಾಕಿಲ್ಲ ! ನೀವೇಕೆ ಹೋದೀರಿ ? ನಮ್ಮ ಊರಲ್ಲಿ ಅಚ್ಚು ಕಟ್ಟಾಗಿ ಉಪಚಾರಗಳು ನಡೆದಿವೆ; ಪ್ರಸಂಗಾನುಸಾರ ಮಗನು ಚತುರ್ಭುಜ ನಾಗತಕ್ಕ ಸಂದರ್ಭವಿದೆ; ಮೇಲೆ ಜಹಾಗಿರದಾರ ಮಾಧವರಾಯರಂಥ ದೊಡ್ಡ ವರ ಕೃಪಾದೃಷ್ಟಿ ! ಇಷ್ಟೆಲ್ಲ ಇರುವಾಗ್ಗೆ ನೀವೇಕೆ ಹೋದೀರಿ ? ನಿಮ್ಮನ್ನು ಹೊರಡಿಸಬೇಕಾಗುವದು.

**ಶಾರದಾ**— ಭಟ್ಟರೆ, ತಾವು ದೊಡ್ಡವರು. ಹೀಗೆ ಬಡವರಾದ ನಮಗೆ ಚುಚ್ಚಿ ಮಾತುಗಳನ್ನಾಡಬಾರದು.

**ಮಾಧವ** — ಭಟ್ಟರೆ, ಅದೆಲ್ಲವಿರಲಿ ! ಈಗ್ಗೆ ನಿಮ್ಮ ಅಂಬೋಣವೇನು ?

**ನಾಗಾ**— ನನ್ನ ಮೊಮ್ಮಗಳನ್ನು ಇವರು ತಮ್ಮ ಮಗನ ಸಲುವಾಗಿ ತಕ್ಕೊಳ್ಳಲಾಗದು.

**ಪದ್ಮ**— (ಪ್ರವೇಶಿಸಿ) ಏನು ಮಾವಯ್ಯಾ, ಒಳ್ಳೇ ಆವೇಶದಲ್ಲಿ ?

**ಮಾಧವ**— ಮಾತಾಬಾಯಿಯವರೊಡನೆ ಸುಮ್ಮನೆ ರಸಕಸಿ !

**ಪದ್ಮ**— ಛೀ ! ಮಾವಾ, ಅವರ ಗೊಡವೆಯೇಕೆ ? ಅಂಥವರ ಮನವನ್ನು ನೋಯಿಸಬಾರದು.

**ನಾಗಾ**— (ಅಣಕಮಾಡರಿ) ಅಂಥವರ ಮನವನ್ನು ನೋಯಿಸಬಾರದು.

ಇವರೇನು ಮೇಲಿನಿಂದ ಇಳಿದು ಬಂದವರೊ ? ಏನು ನಮ್ಮ ದಾಕ್ಷಿಣಾತ್ಯರ ಹಣೇ ಬರಹ ? ಬಿಳೀ ಬಣ್ಣವನ್ನು ನೋಡಿ ಬೆಪ್ಪಾಗಿ ಹೋಗುವುದು !

**ಪದ್ಮ—** ವಿಷಯವೇನು; ಸ್ವಲ್ಪ ತಿಳಿದರೆ ಒಳಿತಾಗಲಿಕ್ಕಿಲ್ಲವೆ ?

**ಮಾಧವ—** ತಮ್ಮ ಮಗಳಾದ ಕಮಲೆಯ ವಿಷಯ. ಕುಮಾರನಿಗೆ ಕೊಡುವ ಸುದ್ದಿಯಿಂದ ಇವರು ರೇಗಿಬಿಟ್ಟಿದ್ದಾರೆ. ಮತ್ತು ಮಾತಾಬಾಯಿಯವರೊಡನೆ ವ್ಯಾಜ್ಯ ನಡಿಸಿದ್ದಾರೆ.

**ಪದ್ಮ—** ಅವರೊಡನೇಕೆ ವೃಥಾ ವ್ಯಾಜ್ಯವು, ಮಾವಯ್ಯಾ ? ಇದೇನು ಸರಿಯಲ್ಲ. ಅವರು ಈ ವಿಷಯದಲ್ಲಿ ಒಂದು ಮಾತು ಸಹ ಆಡಿಲ್ಲ. ನಾವೇ ಎಲ್ಲರೂ ಸೇರಿ ವಿಚಾರಮಾಡುತ್ತಲಿದ್ದೇವೆ.

**ನಾಗಾ—** ಒಳ್ಳೇ ವಿಚಾರಗಳನ್ನು ಮಾಡುವಿರಿ ! ನಮ್ಮ ದೇಶದಲ್ಲಿ ವರಗಳ ಬರಬಿದ್ದಿರಬಹುದಲ್ಲವೆ ? ಇದೋ ನೋಡು, ಪದ್ಮನಾಭಾ, ಕಮಲೆಯ ಕುಣಿತಕ್ಕೆ ನೀವೆಲ್ಲರೂ ತಾಳ ಹಿಡಿದರೆ ನಿಮ್ಮ ಮನೆತನವೇ ಕೆಟ್ಟುಹೋದೀತೆಂದು ತಿಳಿ !

**ಶಾರದಾ—** ಪದ್ಮನಾಭಾಚಾರ್ಯರೆ, ತಮ್ಮ ಗ್ರಾಮಕ್ಕೆ ಬಂದ ನಮ್ಮ ಕೆಲಸಗಳಾದವು. ಇನ್ನು ತಾಯಿ ಮಕ್ಕಳಾವ ನಮ್ಮನ್ನು ಆಶ್ರಮಕ್ಕೆ ಕಳುಹಿಸಬಹುದೇನೆಂದು ಅಪ್ಪಾಜಿಯವರನ್ನು ತಂತಿಯ ಮೂಲಕ ಕೇಳಿಕೊಳ್ಳಿ. ಇಲ್ಲಿ ಹೆಚ್ಚು ಸಮಯ ನಾವು ನಿಲ್ಲಲಾರೆವು. ಹೋಗಿ ಬಿಡುವೆವು.

**ನಾಗಾ—** ಅಷ್ಟು ಮಾಡಿದರೆ, ತಾಯಿ, ನಿಮಗೆ ನಾನು ನನ್ನ ವೆಚ್ಚದಿಂದ ಉಡುಗರೆ ಮಾಡಿ ಕಳುಹಿಸುವೆನು !

**ಪದ್ಮ—** ಮಾವಯ್ಯನವರೆ, ತಾವು ಇಷ್ಟು ಶಿಷ್ಟಾಚಾರವನ್ನು ಮೀರಿ ನಡೆಯಬಾರದು. ತಾಯೀ, ಹಳೇ ಜನಗಳ ಮಾತು ಹಚ್ಚಿಕೊಳ್ಳಬಾರದು. ಇದೊ, ಮಹಾತ್ಮರಿಂದ ತಂತಿಯು ಬಂದಿದೆ !

**ಶಾರದಾ—** (ಆತುರದಿಂದ) ಏನೆಂದು?

**ಪದ್ಮ—** ದಕ್ಷಿಣದೇಶದ ಸಂಚಾರದ ಕಾರ್ಯಕ್ರಮವಿದೆ. ನಾಳೆ ಎರಡು

ಗಂಟೆಯ ಟ್ರೇನಿಗೆ ಇಲ್ಲಿಳಿದು ಪುನಃ ನಾಡದು ಬೆಳಿಗ್ಗೆ ಬೆಂಗಳೂರತ್ತ ಹೋಗ ತಕ್ಕವರು. ಇದೊ, ತಂತಿಯನ್ನು ನೋಡಿಕೊಳ್ಳಿ. (ಶಾರದೆಯ ಕೈಯ್ಯಲ್ಲಿ ಕೊಡುವ)

**ನಾಗಾ—** (ಸ್ವಗತ) ಆಶ್ರಮದ ಆಳಗೋಪಾಳರ ಕೂಳಿಗಾಗಿ ಹಣದ ಕೊರತೆಯಾಗಿರಬಹುದು. ಅಂತೇ ಈ ಹೊಸ ಗಾಂಧೀ ಸ್ವಾಮಿಗಳು ಸಂಚಾರ ವನ್ನು ತೆಗೆದಿರಬಹುದು.

**ಶಾರದಾ—** ಹಾಗಾದರೆ ಅವರ ಸಲುವಾಗಿ ಉತ್ತಮ ಆಡಿನ ಹಾಲು ಮತ್ತು ಸ್ವಲ್ಪ ಹಣ್ಣುಹಂಪಲಗಳನ್ನೂ ತರಿಸಿಡಿರಿ. ಯಾಕಂದರೆ ಅದು ಅವರ ಉಪಹಾರದ ಸಮಯ !

**ನಾಗಾ—** (ವಿಕಟಹಾಸ್ಯ) ಅಯ್ಯೋ ಮಹಾತ್ಮಾ ! ಆಡಿನ ಹಾಲು ಕುಡಿಯುವ ಮಹಾತ್ಮಾ ! ಆ ನಿಷಿದ್ಧ ಮುಂಡೇದು ಆತನ ಪಾಲಿಗೆ ಕಾಮಧೇನುವಾಯಿತೇ ? ಬಳ್ಳೊಳ್ಳಿ ನೀರುಳ್ಳಿಗಳು ಬೇಕಾಗುವದಿಲ್ಲವೇನು ನಿಮ್ಮ ಮಹಾತ್ಮರಿಗೆ ?

**ಮಾಧವ—** ಭಟ್ಟರೆ, ತಾವು ಅಷ್ಟು ದೀರ್ಘಕ್ಕೆ ಹೋಗಬಾರದು. ಮಿತಿಯ ಲ್ಲಿರಿ !

**ಹಿರಣ್ಯ—** ಏನು ರಾಯರೆ, ನಮ್ಮ ಬೀಗರ ಮೇಲೆ ಕೋಪ ?

**ಮಾಧವ—** ಯಾರಾದರೂ ಯೋಗ್ಯತೆಯನ್ನು ಬಿಟ್ಟು ನಡೆಯಬಾರದು. ತಾವೇನು? ಆ ಮಹಾತ್ಮರೇನು? ಸಿಕ್ಕಹಾಗೆ ಟೀಕಿಸುವದೆ? ಧೈರ್ಯವಿದ್ದರೆ, ನಾಳೆ ಅವರೇ ಬರುವರು. ಮಾಡಿರಿ, ಎಷ್ಟು ಬೇಕು ಅಷ್ಟು ವಾದವಿವಾದವನ್ನು, ಅವರ ಗೂಡ. ಸುಮ್ಮನೇ ಹಿಂದೆ ಆಡಿಕೊಳ್ಳುವದು ಬೇಡಾ.

**ಹಿರಣ್ಯ—** ಅವರ ಮುಂದೆ ಇವರ ನಾಲಿಗೆಯು ಏಳುವದೇ ? ಹೇಳಿದ ಮಾತುಗಳಿಗೆಲ್ಲ ಕವಲೆತ್ತಿನಂತೆ ತಲೆಹಾಕಿದರಾಯಿತೋ ಇಲ್ಲವೊ ?

**ನಾಗಾ—** (ಸಿಟ್ಟಿಗೆದ್ದು) ಬಿಡಿ, ಏನು ಹೇಳುವಿರಿ ! ನಾಳೆ ಬಂದಾಗ್ಗೆ ಅವರು ತಮ್ಮ ದೇಶಿಯೋ ಹೇಶಿಯೋ ಆ ವ್ಯವಹಾರಬಿಟ್ಟು ನಮ್ಮ ಧಾರ್ಮಿಕ ವಿಚಾರ ಗಳಲ್ಲೊಂದು ಕೈಹಾಕಲಿ. ಆ ಮೇಲೆ ಹೇಳುವೆನು. ಈಗೇಕೆ? (ಹೋಗುವ. ಎಲ್ಲರೂ ನಗುವರು)

**ಹಿರಣ್ಯ—** ಹೋಗಲಿ ಬಿಡಿ ರಾಯರೆ, ಅವರು ನಾಗಾಭಟ್ಟರು; ಯಾವಾಗಲೂ ಭುಸುಗುಟ್ಟತಕ್ಕವರೆ. ಅದಾಯಿತು; ತಮಗೆ ಸಂಪೂರ್ಣ ಆರೋಗ್ಯವೊ? ನಾಳೆ ಮಹಾತ್ಮಾಜಿಯವರು ಬರತಕ್ಕವರಂತೆ. ಅನಾಯಾಸವಾಗಿ ತಮಗೆ ದರ್ಶನವಾಗುವದು. ಅವರ ವಚನದಂತೆ ತಮ್ಮ ರೋಗ ಸಂಪೂರ್ಣ ಗುಣವಾಗಿಬಿಟ್ಟಿತು. ಅಮ್ಮಾ ಮಾತಾಬಾಯೀ, ಅಂದು ಅವರು ಹಾಗೆ ಹೇಳಿದ್ದಿಲ್ಲವೇ ?

**ಶಾರದಾ—** ಅಹುದು ! ಅದು ತಮ್ಮ ಜ್ಞಾಪಕದಲ್ಲಿರುವದಷ್ಟೇ. ಅದಾಯಿತು. ತಾವು ಮತ್ತು ರಮಾಮಾತೆಯವರು ನನಗೆ ಮಗಳೇ ಎಂದು ಕರೆಯುವ ವಚನವನ್ನಿತ್ತಿರುವಿರಲ್ಲಾ ? ರಮಾಮಾತೆಯವರು ಹಾಗನ್ನುವ ರೂಢಿಯನ್ನು ಮಾಡಿಕೊಂಡಿದ್ದಾರೆ.

**ಹಿರಣ್ಯ—** ಆಗಲಿ; ನಾನಾದರೂ ಚನ್ನಾಗಿ ರೂಢಿಯನ್ನು ಮಾಡಿಕೊಳ್ಳುವೆನು.

**ಪದ್ಮ—** ಅಪ್ಪಾ, ಖಾದೀ ಕಾರ್ಯಾಲಯವನ್ನು ಶೃಂಗರಿಸಬೇಕು. ನಡೆಯಿರಿ ಬೇಗನೆ. ನಮಗೆ ಯೋಗ್ಯ ಸಲಹೆಗಳನ್ನು ಕೊಡಿರಿ. ಮಹಾತ್ಮರನ್ನೆಲ್ಲಿ ಇಳಿಸುವದು ?

**ಮಾಧವ—** ನನ್ನ ಬಂಗಲೆಯು ತೆರವಿದೆಯಲ್ಲಾ ! ಅಲ್ಲಿಯೇ ಇಳಿಸುವಾ.

**ಶಾರದಾ—** ಅದು ಬೇಡಾ. ಈ ಗುಡಿಸಿಲಿನಲ್ಲಿ ಅವರಿಗೆ ಹೆಚ್ಚು ಸಂತೋಷವಾಗುವದು. ಇದೇ ಯೋಗ್ಯವಾದ ಸ್ಥಲವು. ಅಪ್ಪಾಜಿಯವರ ಸ್ವಾಗತವು ರಾಯರಿಂದಾಗುವದು ಒಳಿತಲ್ಲವೇ ?

**ಪದ್ಮ—** ಅದಕ್ಕೆ ನನ್ನನುಮೋದನೆ. ನಡೆಯಿರಿ ಖಾದೀ ಕಾರ್ಯಾಲಯದ ಕಡೆಗೆ ಹೋಗುವಾ !

**ಶಾರದೆ—** ಹಾಗಾದರೆ ನಾನೀ ಗುಡಿಸಿಲವನ್ನು ಚೊಕ್ಕಟವಾಗಿರಿಸುವ ಕಾರ್ಯದಲ್ಲಿ ತೊಡಗುವೆನು. (ಶಾರದೆಯು ಹೊರತು ಮಿಕ್ಕವರು ಹೋಗುವರು) ನಾಳೆ ನನ್ನ ಧರ್ಮದ ತಂದೆಯು ಬರುವನು. ನಾನು ನನ್ನ ಇತ್ಥಂಭೂತವಾದ ಚರಿತ್ರೆಯನ್ನೆಲ್ಲಾ ಆತನಿಗೆ ಬರೆದುಕೊಟ್ಟಿದ್ದೇನೆ ! ನನ್ನ ಪತಿ ಯಾರು, ತಂದೆತಾಯಿ

ಗಳಾದು, ಬಂಧುಬಳಗವಾವುದೆನ್ನುವದೆಲ್ಲ ಆತನಿಗೆ ಗೊತ್ತಾಗಿದೆ. ನಾನಾರೆನ್ನುವದನ್ನೆಲ್ಲಾ ನಾಳಿಗೆ ಪರಿಷ್ಕಾರ ಮಾಡುವನೋ ಏನೊ ? ಅದೇ ಉದ್ದೇಶವಿರಬಹುದು. ಹಾಗಿಲ್ಲದಿದ್ದರೆ ಬರುವ ಮಾರ್ಗದಲ್ಲಿ ಎಷ್ಟೋ ಖಾದೀ ಕೇಂದ್ರಗಳಿವೆ. ಅಲ್ಲಿ ನಿಲ್ಲುವ ಪ್ರೋಗ್ರಾಮು ಇಲ್ಲದೆ ನೆಟ್ಟಗೆ ಇಲ್ಲಿಗೆ ಬಂದು ನಿಲ್ಲುವದರಿಂಗಿತವೇನು ? ಅದೇ ಇರಬಹುದು. ನನ್ನ ನಾಟಕದ ಉಪಸಂಹಾರವನ್ನು ಮಾಡುವ ಉದ್ದೇಶವೇ ಇರಬಹುದು. ಹಾಗಿದ್ದರೆ ನಾನಾರೆನ್ನುವದು ಸಕಲರಿಗೂ ತಿಳಿದು ಬಿಡುವದು. ಅಷ್ಟಾದ ಮೇಲೆ ಮುಂದೆ ನನ್ನ ಪರಿಣಾಮವೇನಾಗುವದೊ ? ಪುನಃ ಸಕಲರೂ ನನ್ನನ್ನು ತಿರಸ್ಕರಿಸುವರೋ ಏನೊ ? ಉಂ ! ಏನಾದರೇನು ? ಆ ನನ್ನ ಧರ್ಮದ ತಂದೆಯ ಅಪ್ಪಣೆಯಂತೆ ನಡೆಪರಾಯಿತು. ನನ್ನ ಸಕಲಾಪ್ತನೆಂದರೆ ಮಹಾತ್ಮಾ! ನನ್ನ ಬಂಧುಬಳಗವೇ ಭಾರತದೇಶ ! ನನ್ನ ಸಂಸಾರಕಾರ್ಯವೇ ದೇಶಸೇವೆ ! ಅದೇನು ತೋಟದಲ್ಲಿ ಗಲಾಟೆ ? ಕಮಲೆಯ ಸ್ವರವು ಕೇಳಿಸುತ್ತಲಿದೆ ? (ಹೋಗುವಳು)

(ತೋಟದಲ್ಲಿ ಕಮಲೆ ಕುಮಾರರು ಕೈಹಿಡಿದು ಬರುವಾಗ್ಗೆ ಭಗೀರಥನು ತಡದು ಕುಮಾರನನ್ನು ಹೊಡೆಯುತ್ತಾನೆ! )

**ಭಗೀರ**— (ಕುಮಾರನನ್ನು ಹೊಡೆಯುತ್ತ). ಬಿಡು ಅವಳನ್ನು. ಚಾಂಡಾಲಾ !

**ಕುಮಾರ**— (ನಗುತ್ತ) ನಾನು ಬ್ರಾಹ್ಮಣ.

**ಭಗೀರ** -- ಯಾವ ಹೊಲೆಯನಾದರೂ ಆಗು. ಮೊದಲವಳನ್ನು ಬಿಟ್ಟು ಆಚೆಗಾಗು ! (ಸಿಟ್ಟಿಗೆದ್ದು)

**ಕಮಲಾ**— ಏ, ಭಗೀರಥರಾವಾ, ಸುಮ್ಮನೆ ಕುಮಾರನನ್ನು ಹೊಡೆಯುವಿ ! ಅವನು ಸಿಟ್ಟಿಗೆದ್ದು ತಿರುಗಿ ನಿನ್ನನ್ನು ಹೊಡೆಯಲಿಕ್ಕೆ ನಿಂತರೆ ನಿನ್ನ ಎಲುವುಗಳು ಉಳಿಯಲಿಕ್ಕಿಲ್ಲ. ಪುಡಿಪುಡಿಯಾದಾವು.

**ಕುಮಾರ**— ಅದಾವದೂ ಆಗಲಿಕ್ಕಿಲ್ಲ. ನಾನು ಸಿಟ್ಟಿಗೇಳುವದೂ ಇಲ್ಲಾ; ತಿರುಗಿ ಭಟ್ಟರನ್ನು ಹೊಡೆಯುವದೂ ಇಲ್ಲಾ. ಕಮಲಾ, ಹೊಡೆಯುವವನ್ನಂತೂ ಎಲ್ಲರೂ ಹುಟ್ಟುತ್ತಲೇ ಕಲಿತುಬಂದಿರುತ್ತಾರೆ ! ಆದರೆ, ಸಂತೋಷದಿಂದ ಹೊಡಿಸಿ

ಕೊಳ್ಳುವದನ್ನು ಯುವಕರು ಅಭ್ಯಾಸಮಾಡಿಕೊಳ್ಳಬೇಕೆಂದು ಅಪ್ಪಾಜಿಯವರ ಕಟ್ಟಪ್ಪಣೆ. ಅದಕ್ಕಾಗಿ, ಭಗೀರಥಭಟಜೀ, ಗೋ ಆನ್.

**ಭಗೀರ—** ಎಲೆ, ಅಪ್ಪಾಜಿಯ ಮಗೋಜೀ, ಅವಳನ್ನು ಬಿಟ್ಟು ದೂರಾಗು. ಇಲ್ಲದಿದ್ದರೆ ನಿನ್ನನ್ನು ಹೊಡೆಹೊಡೆದು ಕೊಂದುಬಿಟ್ಟೇನು. ಅವಳು ನನ್ನ ಭಾವೀ ಪತ್ನಿಯು. ಅವಳ ಅಂಗಸ್ಪರ್ಶ ಮಾಡುವಿಯಾ ?

**ಕಮಲಾ—** ಇಲ್ಲೊ, ನಾನು ನಿನ್ನ ಪತ್ನಿಯಾಗುವದಿಲ್ಲ. ಸುಮ್ಮನೆ ಬಡಬಡಿಸಬೇಡ !

**ಕುಮಾರ—** ಭಟ್ಟಮಹಾಶಯರೆ, ಮುಂದೆ ? ಮುಂದೇನು ಮಾಡುವಿರಿ ? ಇವಳು ನಿಮ್ಮ ಪತ್ನಿಯೇ ಆಗುವದಿಲ್ಲವಂತೆ ? (ನಗುವ)

**ಭಗೀರ—** ಇಲ್ಲದಿದ್ದರೆ ಇಲ್ಲಾ. ಅವಳು ನನ್ನಕ್ಕನ ಮಗಳು. ನೀನೆಲ್ಲಿಯೋ ಕುಲಗೇಡಿ. ಅವಳನ್ನು ಮುಟ್ಟುವದೇಕೆ ? ಅವಳಿನ್ನೂ ಚಿಕ್ಕಮಗುವಲ್ಲ; ಬಿಟ್ಟು ದೂರಾಗು !

**ಕುಮಾರ—** ಹೀಗೋ ? ಹಾಗಾದರೆ ಕಮಲೆ, ನನ್ನನ್ನು ಮುಟ್ಟಬೇಡಾ ! ನಾನು ಕುಲಗೇಡಿಯಂತೆ; ಭಟ್ಟರು ಹೇಳುತ್ತಲಿದ್ದಾರೆ. (ದೂರ ಸರಿಯಲು)

**ಕಮಲಾ—** (ಅವನನ್ನಂಟಿಕೊಂಡು)ಬೇಕಾದಂಥ ಕುಲಗೇಡಿಯಾಗು. ಕುಮಾರ, ನಾನು ನಿನ್ನಗೂಡ ಇರತಕ್ಕವಳೇ. ಭಗೀರಥನಾವನು ಏನು ಮಾಡುವನೋ ಮಾಡಲಿ. ಹೊಡೆಯುವನಲ್ಲವೆ ? ನಾನೂ ನಿನ್ನಂತೆ ಶಾಂತಭಾವದಿಂದ ಹೊಡಿಸಿ ಕೊಳ್ಳುವ ರೂಢಿಯನ್ನು ಮಾಡಿಕೊಳ್ಳುವೆನು. ಹೂಂ, ಮಾವನೇ, ಥಳಿಸು ನಿನ್ನ ಶಕ್ತಿಯಿದ್ದಷ್ಟು ನನ್ನನ್ನು ಥಳಿಸು.

**ಕುಮಾರ—** ಗೋ ಆನ್ ಭಟ್ಟಜೀ ! ಶಾಂತಿಸಂಗ್ರಾಮ. . ನೋಡುವಾ, ಇದರಲ್ಲಾರು ಸೋಲುವರೋ ! (ಭಗೀರಥಭಟ್ಟನು ಅವರನ್ನು ಹೊಡೆಯುವಷ್ಟರಲ್ಲಿ ಮನೋರಮೆಯು ಬಂದು ಅವನನ್ನು ಬೋರಿಗೆಯಿಂದ ಹೊಡೆಯುವಳು).

**ಮನೋ—** ಹೂಂ ನಡಿಸು. ಅವರನ್ನು ನೀನು ಹೊಡೆ; ನಿನ್ನನ್ನು ನಾನು ಹೊಡೆಯುವೆನು.



ಕಮಲಾ.   ಕುಮಾರ.   ಭಗೀರಥ.   ಮನೋರಮಾ.

**ಮನೋರಮಾ:**— ಹೂಂ; ನಡಿಸು. ಅವರನ್ನು ನೀನು ಹೊಡೆ; ನಿನ್ನನ್ನು ನಾನು ಹೊಡೆಯುವೆನು.   [ ಪುಟ ೮೪.

**ಕುಮಾರ—** ಭಟ್ಟರೆ, ನಿಮ್ಮನ್ನು ಹೊಡೆಯುವದಕ್ಕಾಗಿ ನಾವೇನವರಿಗೆ ಹೇಳಿಲ್ಲ! ಅದವರ ಸ್ವತಂತ್ರ ವಿಚಾರ!

**ಮನೋ—** ಎಲೋ ಭಗ್ಯಾ, ಅಸ್ಪೃಶ್ಯನಾದ ನೀನು ಅವರನ್ನು ಮುಟ್ಟಿ ಹೊಡೆಯುವದೇಕೊ? ಅಂ? ಅದು ನಿನ್ನ ಯೋಗ್ಯತೆಯೋ ಕಳ್ಳಾ? ನೀನು ಅವರನ್ನು ಹೇಗೆ ಮುಟ್ಟಿ ಹೊಡೆದಿ! ಹೇಳು! ಕೇವಲ ನಿಷ್ಪಾಪಹುಡುಗರನ್ನು ಬಡಿಯುವಿಯಾ? ನಡೆ ಮುಂದಾಗು. ನಾಳಿಗೆ ನಮ್ಮೂರಿಗೆ ಮಹಾತ್ಮರು ಬರುವರಂತೆ; ಎಲ್ಲ ಬೀದೆಗಳನ್ನುಹುಗಿ ಸ್ವಚ್ಛವಾಗಿರಿಸುವಾ! (ಕೈ ಹಿಡಿದು ಜಗ್ಗುವಳು)

**ರಾಧಾ—** ತಾಯೀ, ಮನೋರಮಾಬಾಯಿ ನಿನಗೆ ಶರಗೊಡ್ಡಿ ಬೇಡಿಕೊಳ್ಳುವೆನು; ನನ್ನ ತಮ್ಮನನ್ನು ಕಾಡಬೇಡ ನಮ್ಮಮ್ಮಾ!

**ಮನೋ—** ರಾಧಕ್ಕನವರೆ, ಇವನು ಆ ಮಕ್ಕಳನ್ನು ಹೊಡೆದನು. ನಾನು ಇವನನ್ನು ಹೊಡೆದೆನು. ನೋಡಿ, ಆ ಹುಡುಗನ ತಲೆಯೊಡೆದು ಹೋಗಿದೆ!

**ರಾಧಾ—** ಅಹುದೆನೋ ಭಗೀರಥಾ? ನೀನವನ್ನು ಹೊಡೆದಿಯಾ?

**ಕಮಲಾ—** ಅಮ್ಮಾ—

**ಕುಮಾರ—** (ಅವಳ ಬಾಯಿಮುಚ್ಚಿ) ಹಾಂ ತಡೆ; ಫಿರ್ಯಾದಿಯನ್ನು ಮಾಡಲಾಗದು. ಅದು ನಮ್ಮ ಶೀಲಕ್ಕೆ ವಿರುದ್ಧ!

**ರಾಧಾ—** ಏತಕ್ಕೆ ನೀನವರನ್ನು ಹೊಡೆದಿಯೋ? ಏ ಬುದ್ಧಿಗೇಡಿ!

**ಕುಮಾರ—** ನಮ್ಮ ಖಾದೀ ಕಾರ್ಯಾಲಯದ ಸೆಕ್ರೆಟರಿಗಳು ಬುದ್ಧಿಗೇಡಿಗಳು.

**ಭಗೀರ—** ಅಕ್ಕಾ, ನಾನವರನ್ನು ಹೊಡೆದಿಲ್ಲಾ!

**ಮನೋರ—** ಮೇಲೆ ಸುಳ್ಳುಹೇಳುವಿಯಾ! (ಹೊಡೆಯುವಳು).

**ಶಾರದಾ—** ಅಮ್ಮಾ, ಆತನನ್ನು ಹೊಡೆದು ಪ್ರಯೋಜನವಿಲ್ಲಾ!

**ಭಗೀರ—** (ಶಾರದೆಯನ್ನು ನೋಡಿ) ಅಯ್ಯಯ್ಯೋ, ಇವರ ಮುಂದೆ ನಿಲ್ಲುವದು ಹೇಗೆ? (ಕೊಸರಿಕೊಂಡು ಓಡುವನು. ಮನೋರಮೆಯು ಬೆನ್ನುಹತ್ತುವಳು).

**ರಾಧಾ—** ಏನು ನಾಚಿಕೆಯಿಲ್ಲದ ಹುಚ್ಚುಹೆಂಗಸಿವಳು?

**ಶಾರದಾ—** ಹುಚ್ಚರಿಗೆ ನಾಚಿಕೆಯಲ್ಲಿ? ನಾಚಿದರೆ ಹುಚ್ಚು ಹೇಗೆ?

**ರಾಧಾ**— ಊರಲ್ಲಿ ನನ್ನ ತಮ್ಮನ ಮುಖನೆತ್ತರದಂತೆ ಮಾಡಿದ್ದಾಳೆ ಚಾಂಡಾಳಿ. ಅವನಾದರೂ ಅವಳನ್ನು ಕಂಡು ಅಂಜಿ ಎಕ್ಕಟ ಹಾಕುವದೇಕೋ!

**ಶಾರದಾ**— ಏನೋ ಪೂರ್ವಜನ್ಮದ ವೈರವಿರಬಹುದು. ನಡೆ ಕುಮಾರ, ತಲೆಗೆ ಪೆಟ್ಟು ಬಹಳ ಹತ್ತಿದೆ. ನಡೆ; ಪಟ್ಟಿಯನ್ನು ಹಾಕುವಾ!

**ರಾಧಾ**— ಅಯ್ಯೋ, ಬಹು ದೊಡ್ಡ ಗಾಯವಾಗಿದೆ. ಕುಮಾರ, ನಿಜವಾಗಿ ಹೇಳು. ಈ ಗಾಯವನ್ನು ಭಗೀರಥನೇ ಮಾಡಿದನೆ?

**ಕಮಲೆ**— ಅಹುದಮ್ಮಾ! (ಕುಮಾರನು ಸುಮ್ಮನಿರುವದಕ್ಕೆ ಸೂಚಿಸುವನು) ನಿಜವಾದದ್ದನ್ನು ಹೇಳೆಂದದ್ದಕ್ಕೆ ಹೇಳಿದೆನು. ಆದರೂ ಅಮ್ಮಾ, ಭಗೀರಥ ಮಾವನ ಮೇಲೆ ನಮ್ಮದೇನೂ ದೂರಿಲ್ಲ!

**ರಾಧಾ**— ಅವನೆಂಥ ಪಾಪಿಯು! ಹೀಗೆ ತಲೆಯೊಡೆಯುವಂತೆ ಹೊಡೆದಿದ್ದಾನೆ! ಶಾರದಮ್ಮನವರೆ, ಬೇಗ ಪಟ್ಟಿಯನ್ನು ಹಾಕುವಾ ನಡೆಯಿರಿ. ರಕ್ತವು ಬಹಳ ಹರಿಯುವದು!

(ಹೋಗುತ್ತಾರೆ. ಬೀದಿಯಲ್ಲಿ ಅಸ್ಪೃಶ್ಯರು ಇಬ್ಬರು. ಮಾರ, ಬೀರ.)

**ಮಾರ**— ಅಲ್ಲೊ ಬೀರಣ್ಣಾ, ಒಮ್ಮಿಂದೊಮ್ಮೆ ನಮ್ಮಂದೀದು ಏನ ಚಮತ್ಕಾರಾಯಿತೊ? ಯಾರ ಬೇಕಾದವರು ಮುಟ್ಟಿಸಿಕೊಳ್ಳಹತ್ತಿದರು; ಬೇಕಾದ ಬಾವಿ, ಕೆರೆ ಮುಟ್ಟಲಿಕ್ಕೆ ಸರ್ರಾಸ ಆತು; ಬೇಕಾದ ದೇವರಿಗೆ ಗುಡ್ಯಾಗ ಮಿಕ್ಕಾದವರು ಹೋಗೋಮಟ ನಮಗೂ ಹೋಗಿ ಕಾಯೀ ಗೀಯೀ ಒಡಿಸಲಿಕ್ಕೆ ಮಾರ್ಗವಾಯಿತು; ಏನ ದೇವರು ಹುಟ್ಟಿಬಂದ್ಹಾಂಗ ಬಂದ್ನೋ ನಮ್ಮಪ್ಪ, ಗಾಂಧಿ ಮಹಾರಾಜಾ! ನಾಯಿಗಿಂತಾ ಅತ್ತತ್ತಾದ ನಮ್ಮನ್ನ ನಾಲ್ಕ ಮಂದ್ಯಾಗ ತಂದುಬಿಟ್ಟಾ!

**ಬೀರ**— ಮಾರಣ್ಣಾ, ಪದ್ದಪ್ಪನೋರ ತಂದ ಹಿರಣೀಗಬ್ಬಾಚಾರನೋಡಿದ್ಯಾ! ನಮ್ಮಂದ್ಯಾಗ ಕಲ್ತು ಕೆಲಸಾಮಾಡೋದಕ್ಕ ಎಲ್ಲಾರಕ್ಕಿಂತ ಮುಂದ! ಮೊದಲೆಲ್ಲೋ ನಮ್ಮ ಕಂದ್ರ ನಾಕಮಾರ ಜಿಗೀತಿದ್ರು ಆಚಾರೆಪ್ಪನೋರು!

**ಮಾರ—** ಎಲೆ ತಮ್ಮಾ, ಬೀರಣ್ಣಾ, ಬುದ್ಧಿವಂತರ ಮಾತು ಬುದ್ಧಿವಂತರಿಗೇ ಮೊದಲ್ತಿಳಿತ್ಯಾವ. ನಮ್ಮೂರಾಗಿನ ಶಾಣೇರಂದ್ರ ಹಿರಣೀಗಬ್ಬಾಚಾರ. ಅಂತೇ ಗಾಂಧಿಮಾರಾಜನಂಥ 'ಬಲ್ಲಾತನ ಹೇಳ್ಕಿ ನಮ್ಮವರ ತಲಿಗೇ ನಾಟಿತು. ಇನ್ನೂ ನಾಗಾಭಟ್ರಂಥಾ ಅರಗಚ್ಚಾ ಮುಂದವೆಲ್ಲಾ ನಮ್ಮನ್ನಾ ಕಲಿಸಿಕೊಳ್ಳಾಕ ಅನಮಾನ ಅನಮಾನ ಮಾಡತದ !

**ಬೀರ—** ಅದ ನಾವು ಮುಸಲ್ಮಾನ್ಗ್ಳಿ ಅಥವಾ ಕಿರಸ್ತಾನ್ರೊಳಗ ಕುಲಗೆಟ್ರ ಎಲ್ಲಾರೊಳಗೂ ನಾವು ಕಲೀತೀವಿ! ಕುಲದಾಗಿದ್ರ ಮಾತ್ರ ಕಲಿಸಿಕೊಂಬೋದಿಲ್ಲ! ಕುಲಗೆಟ್ರ ಮನಸ್ಸಾ ಸುದ್ದಾಗತದ್ದಾನೇನೊ ?

**ಮಾರ—** ಅದೇನೊ ಏನೋಪಾ! ಈ ವಿಚಾರ ನಮ್ಮನ್ನ ಆ ಮುಟ್ಟಿಸಿಕೊಳ್ಳಾರದ ಮಂದೀನ ಕೇಳಬೇಕು.

**ಬೀರ—** ಮೊದಲೆಲ್ಲಾ ನಮ್ಮನ ಕಂಡ್ರ ಬಿಳೇಮಂದೆಲ್ಲಾ ಹಡ್ತಹುಡ್ತ ಮಾಡತಿದ್ರು. ಆ ಅಪಮಾನ ತಾಳ್ದಾ ನಮ್ಮಂದಿ ಕುಲಗೆಡತಿತ್ತು ಅನ್ನು. ಇನ್ನೇನು ನಾಕ ಮಂದ್ಯಾಗ ನಮ್ಮಪ್ಪಾ ಗಾಂಧೀಮಾರಾಜಾ ಕಲಿಸಿಬಿಟ್ಟಾ. ಇನ್ನಮ್ಯಾಲೆ ಕುಲಗೆಡೋದು ತಪ್ಪತಲ್ಲ! ಹಂತಾ ದೇವರಂಥಾತನ್ನ ನಮ್ಮಂದಾಗಿನ ಒಬ್ಬೊಬ್ಬ ಅಕ್ಷರಕಲ್ತ ಅರಗಚ್ಚಾ ಮಂದಿ ನಂಬಿಗಿ ಇಡವಲ್ದಂತ ! ಮೊಸಳೀ ಕುಲದವರು ನೋಡೆಪಾ, ಅವರ ಮಾತ್ರ !

**ಮಾರ—** ಬಿಸಲಾಗಿಂದ ನೀರಾಗ ತಂದ್ಬಿಟ್ಟಾತನ್ನ ಕಚ್ಚಿದರ ಮೊಸಳಿ ಕುಲದವರನ್ದಾ ಮತ್ತೇನನಬೇಕು ! ಅಂಥವರೊಂದ ನಾಕಮಂದಿ ನಮ್ಮ ಕುಲದಾಗ ಹುಟ್ಟಿದ್ರ ಮತ್ತ ನಾವು ಮೊದಲ್ನಂತೆ ಗ್ಯಾಳಕರಾಗುವದೇ ನಿಜ !

**ಬೀರ—** ಹಿಂದಕ ನಮ್ಮಂದಿ ಇಂಥಾದ ಏನಾರ ಪಾಪಾ ಮಾಡಿದ್ದಾರಾದೀತಂತ ನಮ್ಮನ್ನ ಗ್ಯಾಳಕರ್ನ ಮಾಡಿ ಊರಹೊರಗ ಒಗದಿದ್ದಾರಾದೀತು ! ಮತ್ತ ತಿರಗಿ ಹಂತಾ ಪಾಪಾನ ಮಾಡಬೇಕೇನೋ ?

**ಮಾರ—** ಆಗಲಿ ! ಮಾಡದೋರ ಉಣತಾರ ! ನಮಗೇನು ?

**ಬೀರ—** ಮಾಡೋರೊಬ್ಬರು; ಅನುಭೋಗಸ್ಯೋರು ನೂರಾರು ಮಂದಿ.

ಅವಕ ಒಂದ ಕೆಲಸಾ ಮಾಡೋಣಾ! ಅದೇನಂದ್ರ ನಾಳೆ ನಮ್ಮೂರಿಗೆ ಗಾಂಧೀ ಮಹಾರಾಜಾ ಬರತಾನಲ್ಲಾ ದೇವರು ಬಂದ್ಹಾಂಗ. ಆತನ ಮುಂದ ನಮ್ಮೂರ ಹೊಲೆ ಮಾದಿಗ ಮಂದಿನೆಲ್ಲಾ ಕೂಡ್ಹಾಕಿ ಜಳಾ ಜಳಾ ಹೇಳಿಬಿಡಾಣಾ!

**ಮಾರ—** ಏನಂತಾ ಹೇಳಬೇಕೂ?

**ಬೀರ—** ಮಾರಾಜಾ, ಯಾರಬೇಕಾದೋರು ನಿನ್ನ ಬಿಡವಲ್ಲರ್ಯಾಕ! ನಾವೇನ ನಿನ್ನ ಬಿಡೋದಿಲ್ಲ ಅಂತ ಜಳಾ ಜಳಾ ಹೇಳಿಬಿಡಾಣಾ!

**ಪದ್ಮ—** (ಪ್ರವೇಶಿಸಿ) ಎಲೋ ಊರ ಉಡುಗುವ ಕೆಲಸವಾಯಿತೇ?

**ಮಾರ—** ನಮ್ಮೊಮ್ಮವ್ವಾ ಮನ್ನ ನಮ್ಮ ನಮ್ಮ ಸಲುವಾಗಿ ವಂದ್ಬೀದಿ ಉಳಿಸಿದ್ದಿಲ್ಲ. ಮೂಲಿ ಮುಂಗಟ್ಟೆ ಎಲ್ಲಾ ಗೂಡಿಶಿ ಬಿಟ್ಟೆದ್ವಾಳೆ!

**ಬೀರ—** ನಾವು ಬರೇ ಊರೆಲ್ಲಾ ಬೋರಿಗೆ ಹಿಡಕೊಂಡು ತಿರುಗಾಡಿದ್ದೊಂವೇ ಆಯ್ತು!

**ಪದ್ಮ—** ಆಗಲಿ ನಾಳೆ ಮಧ್ಯಾನಕ್ಕೆ ನೀವೆಲ್ಲರೂ ಚನ್ನಾಗಿ ಮೈ ತೊಳೆದುಕೊಂಡು ಸ್ವಚ್ಛವಾದ ಬಟ್ಟೆಗಳನ್ನು ಧರಿಸಿ ಮಹಾತ್ಮರ ಸ್ವಾಗತಕ್ಕಾಗಿ ಸಿದ್ಧರಿರಬೇಕು! (ಹೋಗುವರು.)

---

## ೫ನೆಯ ಪ್ರವೇಶ

**ಮಹಾತ್ಮ—** ಪದ್ಮನಾಭಾಚಾರ್ಯರೇ ನಿಮ್ಮ ಕುಟುಂಬದವರೆಲ್ಲರೂ ಸೇರಿ ಮನಃಪೂರ್ವಕವಾಗಿ ಖಾದೀ ಕಾರ್ಯಾಲಯದ ಕಾರ್ಯಕ್ರಮಗಳನ್ನು ಸಮರ್ಪಕವಾಗಿ ನಡಿಸಿದ ರಿಪೋರ್ಟುಗಳು ನಮಗೆ ಆಗಾಗ್ಗೆ ಬರುತ್ತಲಿವೆ! ನಾನಿಲ್ಲಿಗೆ ಬಂದ ಕಾರಣವೇ ಬೇರೆ!

**ಎಲ್ಲರೂ—** ಅದೇನು ಮಹಾತ್ಮರೇ?

**ಮಹಾತ್ಮ—** ತಾನೇ ತಿಳಿಯುವದು. ಏನು ಭಟಜೀ, ನಿಮ್ಮ ಅಂಬೋಣವೇನು?

**ನಾಗಾ—** ಹೆಚ್ಚಿನದೇನೂ ಇಲ್ಲಾ ! ನಿಮ್ಮ ಮಾತಾಜೀ ತನ್ನ ಮಗನ ಸಲುವಾಗಿ ನನ್ನ ಮೊಮ್ಮಗಳಾದ ಕಮಲೆಯಮೇಲೆ ಬಲೆಹಗೆದಿದ್ದಾರೆ! ಅದನ್ನು ತಕೊಳ್ಳಲಿಕ್ಕೆ ಹೇಳಬೇಕು!

**ಮಹಾತ್ಮ—** ಅದೇನು ಮಾತಾ, ಇವರ ದೂರು ?

**ಶಾರದಾ—** ಅಪ್ಪಾಜೀ, ನನಗೇನೂ ಗೊತ್ತಿಲ್ಲ. ಕಮಲೆಯು ಮತ್ತು ಅವಳ ಬಳಗವೆಲ್ಲಾ ತಮ್ಮ ಎದುರಿನಲ್ಲಿಯೇ ಇದೆ! ಅವರನ್ನೇ ವಿಚಾರಿಸಿದರಾಯಿತು.

**ನಾಗಾ—** ಅಂತೂ ಲಿಪ್ತಾಲಿಪ್ತ ಭಾವವನ್ನು ಈ ಮಾತಮ್ಮನವರು ಚನ್ನಾಗಿ ಸಾಧಿಸಿಕೊಂಡಿದ್ದಾರೆ; ಒಳ್ಳೇ ಪಾತಾಳ ಯಂತ್ರಗಳು !

• **ಮಾಧವ—** ಭಟ್ಟರೆ, ರೀತಿಯನ್ನು ಬಿಟ್ಟು ಮಾತುಗಳನ್ನಾಡಬಾರದು.

**ನಾಗಾ—** ರೀತಿ ಬಿಟ್ಟು ನಡೆದರೇನು ಪರವಿಲ್ಲವಲ್ಲವೆ ? ಮಾಧವರಾವಜಿ, ತಾವಾರೋ ತಮ್ಮ ದೇಶವಾವದೋ ಕುಲವೇನೋ ಗೋತ್ರವೇನೋ ? ಪರರ ಮಕ್ಕಳಿಗೆ ಹೀಗೆ ಮಂಕು ಹಿಡಿಸಬಹುದೆ ? ನೋಡೀ ಅಪ್ಪಾಜಿಯವರೆ, ತಾವು ಕಮಲಾಕುಮಾರರ ವಿವಾಹಕ್ಕೆ ಸಮ್ಮತಿಯನ್ನೇ ಕೊಟ್ಟಿದ್ದಾದರೆ ಸ್ವಾಮಿಗಳಿಂದ ಬಹಿಷ್ಕಾರವೇ ಬಂತೆಂದು ತಿಳಿಯಿರಿ !

**ಮಹಾತ್ಮಾ—** ಇನ್ನು ನನಗೆ ಬಹಿಷ್ಕಾರವನ್ನು ಹಾಕಿಲ್ಲವೇನು, ಸ್ವಾಮಿಗಳು ? ನಾನು ಅಸ್ಪೃಶ್ಯರನ್ನು ಮುಟ್ಟಿಸಿಕೊಳ್ಳುತ್ತಿರುವೆನಲ್ಲ! ಅಲ್ಲದೆ ಭಟಜಿ, ಇವರು ಬ್ರಾಹ್ಮಣರಾಗಿದ್ದಾರೆ !

**ನಾಗಾ—** ಬ್ರಾಹ್ಮಣರೋ, ಹೊಲೆಯರೋ, ಅದನ್ನಾರು ಬಲ್ಲರು ?

**ಮನೊ—** ನಾನು ಬಲ್ಲೆನು. ಅವರು ಬ್ರಾಹ್ಮಣರೇ. ಸದಾಚಾರ ಸಂಪನ್ನರು ಬ್ರಾಹ್ಮಣರಲ್ಲದೆ ಮತ್ತೇನು ? ನಿಜವಾದ ಹೊಲೆಯರು ನಾನು ಮತ್ತು ನಿಮ್ಮ ಮಗನು ! ಅದಕ್ಕೆ ಈ ಮಾಧವರಾಯ ಮಾತಾಬಾಯಿಯವರದೇ ಸಾಕ್ಷಿ ! ಯಾಕಲೋ. ಭಗ್ಯಾ ಹೇಳು. ದೇವರ ಮುಂದೆ ಸುಳ್ಳಾಡಬಾರದು. ನಾವು ಹೊಲೆಯರಲ್ಲವೆ ?

**ಭಗೀರ** – ಅಹುದು. ನಾನು ಹೊಲೆಯನು.

**ನಾಗಾ**—ಥೂ. ಏನು ? ಹೊಲೆ ಮುಂಡೇಗಂಡಾ, ಏನು ಹಾಗೆ ಬೊಗಳಿದರೆ?

**ಮನೋ**— ನಿಜವಾಗಿಯೂ ಅವನು ಹೊಲೆಮುಂಡೆಯ ಗಂಡನೇ ಆಗಿದ್ದನು. ಏಕೆ ಅಹುದಲ್ಲವೊ ?

**ಭಗೀರ**— ಅಹುದು !

**ನಾಗಾ**— ಎಲಾ ಚಾಂಡಾಲಾ ! ನೀನು ನನ್ನ ಮಗನಾಗಿ ಹೊಲತಿಯನ್ನು ಲಗ್ನವಾಗಿದ್ದಿಯಾ ?

**ಭಗೀರ**— ಅಹುದು !

**ನಾಗಾ**— (ಹಣೆಯನ್ನು ಬಡಿದುಕೊಂಡು) ಶಂಕರಾ ಶಂಕರಾ ಮೃತ್ಯುಂಜಯಾ, ಸದ್ಗುರುನಾಥಾ, ನಿನ್ನ ಚಿತ್ತ !!

**ಮಾಧವ**— ಇನ್ನು ಈ ವಿಷಯದಲ್ಲಿ ಹೆಚ್ಚಿನ ಚರ್ಚೆಯು ಬೇಡ ! ತೆಯಿದ ಹಾಗೆಲ್ಲ ಇಪ್ಪಲಿಯಿಂದ ಕಪ್ಪೇ ಹೊರಬೀಳುವದು !

**ಹಿರಣ್ಯ**— ಸ್ವಾಮಿ ನಾಗಾಭಟ್ಟರೆ, ಮುಂದೇನು ? ಅಂದೆ.

**ನಾಗಾ**— ಇರುವದಲ್ಲ ರೌರವ ನರಕ !

**ಮಹಾತ್ಮ**— ಬಹು ತೊಡಕು ಬಹು ತೊಡಕು ! ಅಸ್ತು. ಮಾತಾ, ಈ ತೊಡಕನ್ನು ಬಿಡಿಸಿಬಿಡುವ ಒಂದು ಪದ್ಯವನ್ನು ಹೇಳು !

**ಶಾರದಾ**— ಅಪ್ಪಾಜೀ, ತೊಡಕು ಬಿಡುವದೋ ಅಥವಾ ಹೆಚ್ಚಾಗಿ ಬೀಳುವದೊ ! ಯಾರು ಬಲ್ಲರು ?

**ಮಹಾತ್ಮ**— ಗಾಬರಿಯಾಗಬೇಡ, ಮಾತಾ ! ಆ ಸತ್ಯಸಂಕಲ್ಪನ ಸಂಕಲ್ಪವು ಅಸತ್ಯವಾಗಬಹುದೆ ? ನಿರ್ಭಯವಾಗಿ ಹೇಳು. ಆದದ್ದಾಗಲೀ ! ನಮ್ಮ ಮಾತಾಜಿಯು ಹೇಳುವ ಪದ್ಯಾರ್ಥವನ್ನು ಮಾಧವರಾಯರು ಚನ್ನಾಗಿ ಗ್ರಹಿಸಲಿ!

**ಎಲ್ಲರೂ**— ಎನು ಚಮತ್ಕಾರವಿದು ?

**ಮಹಾತ್ಮ**— ಇದೇ ನೋಡಿ, ಸತ್ಯಸಂಕಲ್ಪದ ಚಮತ್ಕಾರವು ಹೇಗಿದೆ ? ಹೂಂ, ಮಾತಾ ಅದೋ ಅಂದು ಸಾಕ್ಷಿಯಾಗಿದ್ದ ಸೂರ್ಯನಾರಾಯಣನು

ನಿನ್ನ ಸಲುವಾಗಿ ಸಾಕ್ಷಿಯನ್ನು ಹೇಳುವದಕ್ಕೆಂದು ಅಲ್ಲಿಯೇ ತಡೆದಿದ್ದಾನೆ! ಹೆಚ್ಚಾಗಿ ಆತನನ್ನು ನಿಲ್ಲಿಸಿಕೊಳ್ಳಬೇಡ! ಹೂಂ ತೀವ್ರ ಹೇಳು.

**ಶಾರದೆ**— (ಹದಿನೆಂಟು ವರುಷಗಳಾಚೆಗೆ ಪಾಣಿಗ್ರಹಣಕಾಲಕ್ಕೆ ಮಾಧವರಾಯನು ಹೇಳಿದ ಪದ್ಯವನ್ನು ಹೇಳುವಳು)

**ಮಾಧವ**— ಅಹಹ! ನೀನು ಶಾರದೆಯೆ ? ದೇವೀ—(ಅವಳ ಕಾಲಿಗೆರಗುವನು ಪಶ್ಚಾತ್ತಾಪ)

**ರಮಾಬಾಯಿ**— ಬಾ ನನ್ನ ಕೂಸೆ ! (ಶಾರದೆಯನ್ನಪ್ಪಿಕೊಳ್ಳುವಳು)

**ಶಾರದೆ**— (ತಂದೆಗೆ ನಮಿಸುವಳು)

**ಹಿರಣ್ಯ**— ಅಷ್ಟಪುತ್ರಾ ಸೌಭಾಗ್ಯವತೀ ಭವ !

**ಮಹಾತ್ಮ**— ಇದೇನು ಇವಳ ಪುನರ್ವಿವಾಹಕ್ಕೆ ತಾವು ಒಪ್ಪಿಗೆಯನ್ನು ಕೊಟ್ಟಿರಾ ?

**ಹಿರಣ್ಯ**— ಕರ್ಮಸಾಕ್ಷಿಯಾದ ಆ ಜಗಚ್ಚಕ್ಷುವೆ ಒಪ್ಪಿಕೊಂಡು ನನ ಕೂಸಿನ ಸತ್ಯವಾದ ಸಂಕಲ್ಪಕ್ಕೆ ಸಮ್ಮತಿಯನ್ನು ಕೊಟ್ಟಿರುವಾಗ್ಗೆ ನಾನು ಸಮ್ಮತಿಸದಿರುವದು ಅಧರ್ಮವಲ್ಲವೆ ?

**ಪದ್ಮ**— ವರ್ತಮಾನವು ಒಪ್ಪಿಕೊಳ್ಳದಿದ್ದರೂ ಭವಿಷ್ಯವು ನಿಸ್ಸಂದೇಹವಾಗಿ ಒಪ್ಪಿಕೊಳ್ಳುವದೆಂದೂ ಮತ್ತು ಈ ಪುನರ್ವಿವಾಹವು ವಿವಾಹದಷ್ಟೇ ಧರ್ಮ ಸಮ್ಮತವಾದದ್ದೆಂದೂ ವಿಶ್ವಾಸವುಂಟಾದುದಕ್ಕೆ, ಇದೊ ಈ ನನ್ನ ಮಗಳಾದ ಕಮಲೆಯನ್ನು ನನ್ನ ಸಹೋದರಿಯ ಮಗನಾದ ಕಮಾರನಿಗೆ ಕೊಡುವೆನು !

**ನಾಗಾ**— ನಿಲ್ಲಯ್ಯಾ ನಿಲ್ಲು ! ಹಾಗೆ ಯದ್ವಾತದ್ವಾ ಮಾತಾಡಿದರೇನು ? ನಿನ್ನ ತಂಗಿಯ ಪುನರ್ವಿವಾಹವು ಧರ್ಮಸಮ್ಮತವಾದದ್ದೆ ?

**ಮಾಧವ**— ನಿಸ್ಸಂದೇಹವಾಗಿ ಧರ್ಮಕ್ಕೆ ಸಮ್ಮತವಾದದ್ದು. ಅಂತೇ ಆ ಧರ್ಮವು ಶಾರದೆಯು ನನಗೆ ಕೊಟ್ಟ ಶಾಪವನ್ನು ಸತ್ಯಮಾಡಿ ತೋರಿಸಿತು.

**ಮಹಾತ್ಮಾ**— ಏನು ಮಾತಾ, ಪತಿಗೆ ಶಾಪವನ್ನು ಕೊಟ್ಟಿದ್ದಿಯಾ ?

**ಶಾರದಾ—** ಸಿಟ್ಟಿನ ಭರದಲ್ಲಿ ನನ್ನಿಂದ ಆ ಪ್ರಮಾದವಾಗಿತ್ತು.

**ಮಾಧವ—** ಅದೊ, ಆ ಸೂರ್ಯನಾರಾಯಣನ ಸಾಕ್ಷಿಯಾಗಿ ನಾನಿವಳ ಪಾಣಿಗ್ರಹಣವನ್ನು ಮಾಡಿದೆ. ಮುಂದಿವಳು ಗರ್ಭಿಣಿಯಾಗುತ್ತಲೆ ಇವಳ ಅಣ್ಣಂದಿರಾದ ಈ ಪದ್ಮನಾಭಾಚಾರ್ಯರೆದುರಿನಲ್ಲಿ ಇವಳಿಗೆ ಪರಿಪರಿಯಾಗಿ ಅವಾಚ್ಯವಾಡಿ ನಿರಾಕರಿಸಿದೆ. ನಾನು ಹಾಗೆ ಮಾಡಿದ್ದಕ್ಕೆ ಇವಳು ರೊಚ್ಚಿಗೆದ್ದು ಕೊಳೆತು ಕೊಳೆತು ಹಾದಿಯ ಹೆಣವಾಗಿ ಸಾಯಿಯೆಂದು ಶಾಪವನ್ನು ಕೊಟ್ಟಿದ್ದಳು. ನಾನು ಹಾಗೆಯೇ ಆದವನು; ಆದರೆ ಈ ದೇವಿಯು ಮಹಾತ್ಮರ ವಚನಗಳಲ್ಲಿ ಅಖಂಡ ವಿಶ್ವಾಸವನ್ನಿಟ್ಟು, ಪುನಃ ನಮ್ಮ ಗ್ರಾಮಕ್ಕೆ ಬಂದು, ಪಶ್ಚಾತ್ತಾಪಾಗ್ನಿಯಿಂದ ಬೆಂದ ನನ್ನನ್ನುಪಚರಿಸಿ ಮಹಾರೋಗ ಮುಕ್ತಮಾಡಿದಳು.

**ಹಿರಣ್ಯ—** ಧರ್ಮಕ್ಕೆ ಸಮ್ಮತವಿತ್ತಂತೇ ಶಾರದೆಯ ವಚನಗಳು ಸತ್ಯವಾದವು. ಆಗಲಿ, ಪದ್ದಾ ಒಪ್ಪಿಸು ಕಮಲೆಯನ್ನು ಕುಮಾರನಿಗೆ. ಮಗು ರಾಧಾ, ನೀನು ನಿನ್ನ ಪತಿಯ ಧರ್ಮಕಾರ್ಯಕ್ಕೆ ನೆರವಾಗು. (ಕಮಲಾ ಕುಮಾರ ವಿವಾಹ)

**ನಾಗಾ—** ನಿಲ್ಲಿ! ಸ್ವಾಮಿಗಳಿಗೆ ಹೇಳಿ ಈ ಪ್ರಪಂಚಕ್ಕೆಲ್ಲಾ ಬಹಿಷ್ಕಾರವನ್ನು ಹಾಕಿಸದಿದ್ದರೆ ನಾನು ನಾಗಾಭಟ್ಟನೇ ಅಲ್ಲಾ! (ಹೋಗುವನು.)

**ಮಹಾತ್ಮಾ—** ಹಾಗೆ ನಾವೆಲ್ಲರೂ ಧರ್ಮದಿಂದ ಬಹಿಷ್ಕೃತರಾದರೆ ಅದೇ ಸತ್ಯಸಂಕಲ್ಪವೆಂದು ಹೇಳುವಾ!

## ಸಂಪೂರ್ಣ

ಮುದ್ರಕ—ಖಂ. ರಾ. ಭಿಸೆ, ಕ. ಪ್ರಿಂ. ವರ್ಕ್ಸ್, ಧಾರವಾಡ ೩೧೪೭,೩೩,೨೦೦೦.

## ॥ ಶ್ರೀ ದತ್ತರಾಜ ಸಮರ್ಥ ॥

"ಸತ್ಯಸಂಕಲ್ಪ" ನಾಟಕವನ್ನು ಸಂಗೀತದೊಂದಿಗೆ ಪ್ರಯೋಗಿಸ ಬಯಸುವವರು ಈ ಕೆಳಗೆ ಕೊಟ್ಟ ಪದ್ಯಗಳನ್ನು ನಿರ್ದಿಷ್ಟವಾದ ಸ್ಥಳಗಳಲ್ಲಿ ನಿರ್ದಿಷ್ಟವಾದ ಪಾತ್ರಗಳಿಂದ ಹೇಳಿಸಬಹುದು.

ಪದ ೧. ಪುಟ ೧.

**ರಮಾಬಾಯಿ—** ಶಾರದೆಯನ್ನು ಹುಡುಕುತ್ತ ಹೊರಟಾಗ್ಗೆ

ರಾಗ ಪಹಾಡ—ಕೇರವಾತಾಲ.

ಅನುಮಾನ ಮಗ್ನಳಾದೆ ॥ ತನುಜಾತೆಗೋಸುಗ । ಮಾನಸದೆ ॥ ಪಲ್ಲ ॥
ತರುಣಿಯಾಗಿ ತಾನೀ ತೆರ ನಿಲಯುವ ॥ ತೊರೆದು ಬೇರೆ ತಿರುಗಾಡಲು ಬಹುದೆ ॥ ೧ ॥

ಪದ ೨. ಪುಟ ೨. ಸಾಲು ೧೯.

**ಮಾಧವರಾಯ—** "ನಿನ್ನ ಪಾಣಿಗ್ರಹಣ ಮಾಡುವೆನು" ಎಂಬುದರ ಮುಂದೆ.

ಮಟ್ಟು :— **गोविंदपदीं मनरत**. ರಾಗ ದೇಸಕಾರ, ತಾಲ ತ್ರಿವಟ.

ನಾ ನೀಡುವೆನೆ ವಚನವ ಬಾಲೆ ॥ ವನಜನಯನೆ ನೆನೆದು ಮನದೆ ದಿನಪ ನಂಘ್ರಿ ಸಾಕ್ಷಿಯಾಗಿ ॥ ಪಲ್ಲ ॥
ಧರ್ಮ ಅರ್ಥ ಕಾಮ ಮೋಕ್ಷ ಸಾಧಿಸೆ ॥ ಪರಿಣಯಿಸುವೆ ನಾನೀಗ ॥೧॥

ಪದ ೩. ಪುಟ ೪. ಸಾಲು ೧.

**ಶಾರದಾ—** "ಅಂಪರೆ" ಇದರ ಮುಂದೆ.

ಮಟ್ಟು :— **लागे हृदयीं हुरहुर** ರಾಗ ಯಮುನ, ತ್ರಿತಾಲ.

ವೈಧವ್ಯವ ದೂರಿಸಿದಾ ॥ ಮಮ ॥ ಮುದಯಿಸಿದನು ಮೃದು ಹೃದಯದ ತರುಣನು ॥ ಪಲ್ಲ ॥
ಆತನು ತಾನಿರುವನು ಕುಲವಂತಾ ॥ ಶೀಲವಂತೆನನುಪಮ ಸಿರಿವಂತಾ ॥ ೧ ॥

ಪದ್ಯ ೪. ಪುಟ ೬. ಸಾಲು ೮.

**ನಾಗಾಭಟ್ಟ**— "ಶಿವಶಿವಾ" ಇದರ ಮುಂದೆ

ಕಂದ—ಬಿಹಾಗರಾಗದಲ್ಲ.

ಸೇರದಿರರೆ ರೌರವವ ॥ ಪೂರ್ವಿಕರೀ ಶ್ವಪಚರಿಂಗೆ ಶಿರಬಾಗಿದರೆ ॥
ಧಾರುಣಿಗೆ ದೇವರೆನಿಸುವ ॥ ಹಾರುವರಿದೊ ? ಹರಹರಾ ! ಇದೇನು ಅನರ್ಥಾ ॥ ೧ ॥

ಪದ ೫. ಪುಟ ೧೦. ಸಾಲು ೩.

**ಮಾಧವರಾಯ**— ಪ್ರವೇಶದೊಡನೆ—

ಗಜ್ಜಲ—ರಾಗ ಮಾಂಡ; ತಾಲನೇರವಾ.

ತಾನಾದುದೀಗ ಮೋದಾ । ನಾಗೈದ ಕಾರ್ಯದಿಂದ ॥
ಬಿಸಜಾನನಾ ಸುಬಾಲಾ । ವಶಳಾದುದತಿ ಅಗಾಧಾ ॥
ಮರಿಯಾದೆಗೆನ್ನಗಿರುವಾ । ಬರಲಾರದಾವ ಬಾಧಾ ॥
ಇಂತೀ ವಿಶೇಷದಿಂದ । ಎಂತಹುದು ಗೌಪ್ಯ ಶೋಧಾ ॥ ೧ ॥

ಪದ ೬. ಪುಟ ೧೧. ಸಾಲು ೨೧.

**ಮಾಧವರಾಯ**— ಹೋಗುವ ಮುಂದೆ ಕೊನೆಗೆ—

ಮಟ್ಟು :— **नंदनंद ब्रिजराज मुरलिवाला** ರಾಗ ಬಿಹಾಗ; ತಾಲ ತ್ರಿವಟ.

ಹೇಗೆ ನಾನು ಪಾರಾದೆ ಸಹಜವೀಗಾ । ತಾನಿದುವೆ ಅಮೃತ ಸುಯೋಗ ॥ **ಪಲ್ಲ** ॥
ಮನಕೆ ಬಂದತೆರ ಖಲಕರ್ಮಗಳಾ । ಚರಿಸಿ ಮೇಲೆ ಸಂಭಾವಿತರಾಗಿ ॥
ಜನರೊಳು ಮುಖಮೇಲೆತ್ತಿ ಬೆದರದೆ । ಮೆರೆಯುವವರೆ ಭಾಗ್ಯವಂತ ರಲ್ಲವೆ ॥ ೧ ॥

ಪದ ೭. ಪುಟ ೧೪. ಸಾಲು ೨೦.

**ಶಾರದಾ**—"ದೇವರು ಮೆಚ್ಚುವನೇ ?" ಇದರ ಮುಂದೆ.

ಮಟ್ಟು :—**आनंदे नटती** ರಾಗ ಮಲ್ಹಾರ; ತಾಲ ತ್ರಿವಟ.

ಈಶಾನುಗ್ರಹವಾ ॥ ನಾ ಸಂಪಾದಿಸಿದೆನು ಬಾಂಧವಾ ॥ ಪಲ್ಲ ॥

ಕರುಣಾಕರನೋರ್ವನು ದಯದಿಂದ । ಮರುಗಿ ಮುಕ್ತಮಾಡಲು
ವೈಧವ್ಯದ ॥
ನರಕದಿಂದಲೆನ್ನನು ಉದ್ಧರಿಸಿದ । ನೊರೆಯುಲೇನು ಮೋದಾ ॥ ೧ ॥

ಪದ ೮ ಪುಟ ೨೩. ಸಾಲು ೩.

**ಹಿರಣ್ಯಗರ್ಭಾಚಾರ್ಯ—**

ಶೀಸಪದ್ಯ:—ಮುಖಾರೀ ರಾಗದಲ್ಲಿ.

ಇಳಿದ ಕಲಿರಾಯ ತಾನಿಳೆಗೆ ನಿಃಸಂಶಯ
ಪ್ರಳಯ ಕಾಲವ ತರಿಸುವ ॥
ಕುಲಗಳುಳಿಸದೆ ಕಲಿಸಿ ಹೊಲೆಮಾದಿಗರನೆಲ್ಲ ।
ಬಲುಮಾಯ ಬೋಧದಿಂದ ॥
ಸಲೆವೇದ ಶಾಸ್ತ್ರಾದಿಗಳನೋದಿ ಪಾಂಡಿತ್ಯ
ಗಳಿಸಿದಂತಹರೆಲ್ಲರು ॥
ಇಲಿಗಳಂದದಿ ಇವನ ಬಲೆಗೆ ಪಟಪಟ ಬಿದ್ದು
ಕುಲಗೆಟ್ಟು ಪೋಪರಂತೆ ॥
ಮಾದಿಗರ ಕರದನ್ನ ನೀರು ಕೊಳ್ಳುವನಂತೆ.
ಮದನಮೋಹನ ಮಾಲ್ವಿಯಾ ॥
ಆದರುಶ ಕರ್ಮಠ ಬ್ರಾಹ್ಮಣನು ತಾ ಸಹಿತ
ಬಿದ್ದನಂತಿವನ ಬಲೆಗೆ ॥ ೧ ॥

ಪದ ೯. ಪುಟ ೨೭ ಸಾಲು ೧೦.

**ಶಾರದಾ—**"ಆಚಂದ್ರಾರ್ಕ ಬಾಳುವ ಚಿರಂಜೀವಿಯು" ಎಂದನಂತರ

ಮಟ್ಟು—**ಮಮಭಾಗ್ಯ ಕಾಳ ಆಲಾ** ರಾಗ ಕಾಪಿ; ತಾಲ ತ್ರಿವಟ.

ಬಹು ಭಾಗ್ಯಶಾಲಿ ತನಯಾ ॥ ಪರಮಪುಣ್ಯಕಾಯಾ ॥ಪಲ್ಲ॥
ಸಹಜವೆ ಪಡೆದ ಮಹಾತ್ಮರಂಥ ॥ ಸಾಧುಸನ್ನಿಧಿಯಾ ॥ಅನುಪಲ್ಲ॥
ಯಾವನು ಲೋಕಸೇವಾ ॥ ವ್ಯವಸಾಯವೆಂದು ನೆನೆವಾ ॥ ತದನುಸಾರ
ವರ್ತಿಸುವಾ ॥ ಅವನಿಗಲ್ಲವೇ ಶ್ರೇಯಾ ॥ ೧ ॥

ಪದ ೧೦. ಫುಟ ೩೭; ಸಾಲು ೨೨

**ಶಾರದಾ**—ಕೊನೆಗೆ

ಮಟ್ಟು:— **शांतदांत कालिकांहि** ರಾಗ ಬಿಹಾಗ; ತಾಲಯುಕಾ

ಆ ದಯಾಮಯಾ ಮಹೇಶ ಆದಿತೇಯ ಸನ್ನುತಾ ॥
ಈ ಧರಿತ್ರಿ ಜೀವಕೋಟಿ ಭಾರವಹಿಸಿದಾತಾ ॥ಪಲ್ಲ॥
(ಚಲತಿ)ತಾ ಮಾನವರೂಪ ತಾಳಿ ಅವತಾರವ ಗೈವಾ ॥
ಪ್ರೇಮದಿಂದ ಸಗಲ ಜಗದ ಚಿತ್ತಾಕರ್ಷಿಸುವಾ ॥
ದೇಶಕಾಲಕನುಗುಣ ಸದ್ಧರ್ಮವ ಸ್ಥಾಪಿಸುವಾ ॥
ನಾಶಗೈವತಮವಿಶಿಷ್ಟ ಚಲವಾದದ ಬಲವಾ ॥ ೧ ॥

ಪದ ೧೧. ಫುಟ ೩೮; ಸಾಲು ೫

**ಮಾಧವರಾಯ**—ಪ್ರಾರಂಭಕ್ಕೆ

ಮಟ್ಟು:— **दयाघना तुज कांनये** ರಾಗ ಪಹಾಡಿ, ತಾಲ ಕೇರವಾ

ಇದೇನನಾಹುತ ಯಾತನೆಯು ಮಾ ॥ ಬದುಕಿದುದೇಕೆ ಎನ್ನಯ ಜನುಮಾ । ಪೋದುದು ತನುಪ್ರೇಮಾ ॥ ಪಲ್ಲ ॥
ಕೊಳೆಯುವ ತನುವಾ॥ ಗಳಿಲನೆ ಬಿಡಿಸೈ॥ತಾಳೆನು ತಾ ದಾಹಾ ರಾಮಾ॥೧॥

ಪದ ೧೨. ಫುಟ ೪೪. ಸಾಲು ೭

**ಮಾಧವರಾಯ**—ಕೊನೆಗೆ

ಮಟ್ಟು:— **सुगुणनखराचे.** ರಾಗ ಕಾಪಿ; ತಾಲಯುಕ್ತಾ.

ಸಲಹಿದಿ ಶಿವಲೀಲಾ ॥ ಪಲ್ಲ ॥ ಕೇಳನಾ ದಯಾಳುವಾಳ್ವ । ತಿಳಿಯದು ತವಲೀಲಾ ॥ ಅನುಪಲ್ಲ ॥
ಕಾನನವನು ಸುತ್ತಿ ಸುಡುವ । ತಾನತೀ ಪ್ರಚಂಡ ಬೆಳೆವ ॥
ಅನಲದಿ ಸಿಲುಕಿರುವ ದೀನ । ಜನುಮವ ಕಾರುಣ್ಯ ಜಲವ ॥ ಸುರಿಸಿ ದೀನ ಜನಪಾಲಾ ॥ ೧ ॥

ಪದ ೧೩. ಫುಟ ೪೭. ಸಾಲು ೧೩.

**ಮಾಧವರಾಯ**—"ಯಾವಾಗ ನೋಡೇನೋ ಎನ್ನುವಹಾಗಾಗಿದೆ" ಎಂದನಂತರ.

ಮಟ್ಟು:— गाते गुणकला. ರಾಗ ಸಾರಂಗ, ತಾಲ ಕೇರವಾ

ಆನಂದರವಿಯಾ ॥ ತಾನ್ಮಾದುದುದಯಾ ॥ ಪಲ್ಲ ॥
ರೋಗವಮುಕ್ತಕಾಯಾ । ಆಗುವದೈನ್ಯಾ ॥
ಸಾಗರಗೇಹಾ । ನಾಗಾರಿತುರಂಗ ರಾಯಾ । ಕೋರಿದ ಮಾಯಾ ॥ ೧ ॥

ಪದ ೧೪. ಪುಟ ೪೭. ಸಾಲು ೨೩.

**ಮನೋರಮಾ**—"ಎದೆಯು ಹೇಗೆ ಧಡಧಡಾ ಬಡಿದುಕೊಳ್ಳುತ್ತಿರುವದು" ಎಂದನಂತರ.

ಮಟ್ಟು:— अतिआनंद फुलवि ककिका ರಾಗ ಮಿಶ್ರಗೌಡಸಾರಂಗ; ತಾಲ ತ್ರಿವಟ

ಪ್ರಿಯಾ ಆ ಪೋಪ ಕರಿಣಾ ಸಮಯಾ ॥ ಇದೋ ಹಾರಿಸುವದದು ಮಮ ಹೃದಯಾ ॥ ಪಲ್ಲ ॥
ಮರೆಯದಿರುವದದು ಗಡಗಡ ನಡುಗುವ । ಪರಿಯ ನೋಡು ಕಾಯಾ ॥ ೧ ॥
ಮಸಣ ಭೂಮಿಯೊಳಗಿನ ಹೆಣವದು ತಾ । ಅಶನಕಾಗಿ ಬರುವಂತೆ ಬಂದತಾ । ವಿಷಮಯ ವೀ ವಿಷಯಾ ॥ ೨ ॥

ಪದ ೧೫. ಪುಟ ೫೨. ಸಾಲು ೬

**ನಾಗಾಭಟ್ಟ**— " ದೇಶವೆಲ್ಲಾ ಒಂದೇ ಮಾರ್ಗವನ್ನೇ ಹಿಡಿದು ಬಿಟ್ಟಿದೆ " ಎಂದನಂತರ.

ಮಟ್ಟು:— ಭುವನದಾಸುಡಾನಿ ರಾಗ . ತಾಲ

ಎಂಥ ಕಾಲ ಬಂತೋ ಕಂತುವೈರಿ ನಮಗೆ ॥ ಪಲ್ಲ ॥ ಪಂಥಮಾಡಿ ಮುಟ್ಟ।
ದಂಥ ಜಾತಿಗಳ ನಿ । ಶ್ಚಿಂತೆಯಿಂದ ಮುಟ್ಟು । ವರು ವಿಪ್ರರು ॥ ಅನುಪಲ್ಲ ॥
ಹರಹರಾ ಇದೇನು ! ತರಿಸಿದಯ್ಯ ಪ್ರಲಯ ॥ ವರ್ಣಸಂಕರ । ಭರದಿ ಗೈಯುಲು ।
ಸ್ಪರ್ಧೆನಡಿಸುತೆ ಭೂ । ಬರ್ಧಿಲರು ಪಾಪ ॥ ಕರ್ದಮದೊಳು ತಾವ್ ॥ ಬಿದ್ದು ಪೋಪರಿನ್ನು ॥ ೧ ॥

ಪದ ೧೬. ಪುಟ ೬೦. ಸಾಲು ೨೫.

**ಮಾಧವ**— "ನಿಮ್ಮ ಅಪ್ಪಣೆಯಂತೆ ನಡೆದುಕೊಳ್ಳುವೆನು" ಎಂದಬಳಿಕ

ಮಟ್ಟು:— **हत्तमान भायो.** ರಾಗ ಕಮೋದ; ತಾಲ ತ್ರಿವಟ

ಜನಸೇವೆಯಾ ಗೈವೆ ॥ಪಲ್ಲ॥ ಮನದೊಳು ಸಂತ್ರತಾ ಮನಮೋಹನಾಂ
ಗಿಯಾ ॥ ಅನುಪಮ ಶೀಲಸುಗುಣಗಳ ನೆನಿಸುತೆ ॥ ೧ ॥

ಪದ ೧೭. ಪುಟ ೬೧ ಸಾಲು ೧೧.

**ಮನೋರಮಾ**— ಪ್ರವೇಶಿಸುವಾಗಲೇ,

ಮಟ್ಟು:— **प्रणयस्त सदया** ರಾಗ ತಿಲಕಕಮೋದ; ತಾಲ ಝಂಪೆ.

ಧರಿಸಿರುವ ವಸನಾ । ರಾರಾಜಿಸುವದೀಗ ॥ ಸುರಸುಂದರಾಂಗನೆಗೆ ಮೀರಿ
ಸಿದೆ ಚಲುವಿಕೆಯ ॥ಪಲ್ಲ॥ ಈ ಖಾದಿಯೊಳಗೇನು ಮೋಹಿನಿಯು ತುಂಬಿ
ಹುದೋ ॥ ನಾ ಕಾಣೆ ಮುಖದೊಳಗೆ ಮಿಂಚುವದು ಮಿರುಗು ಘನ॥೧॥

ಪದ ೧೮. ಪುಟ ೬೮. ಸಾಲು ೨೪.

**ಮನೋರಮಾ**— ರಾಯರೆ, ಎಂದುಬಳಿಕ

ಮಟ್ಟು:— **सोनेके यह**– ಗಜ್ಜಲು. ರಾಗ ಭೈರವೀ ತಾಲ ಕೇರವಾ

ನಾನಾಗಿ ಮಾಡಿಕೊಂಡೆ । ಸಂಸಾರದ ವಿನಾಶಾ ॥ ಇನ್ನೇನು ಭೂಮಿಯಲ್ಲಿ।
ನಾ ಮಾಡಲಾವ ಆಶಾ ॥
ಸತಿರತ್ನ ಸಾಲಿನಲ್ಲಿ । ಎನ । ಗೆಲ್ಲಿದೆ ಪ್ರವೇಶಾ ॥ ಇನ್ನೆಂತು ಕಾಣಲೀ ನಾ।
ಸ । ಧರ್ಮದ ಪ್ರಕಾಶ ॥೧॥

ಪದ ೧೯. ಪುಟ ೭೦ ಸಾಲು ೧೬

**ಮನೋರಮಾ**— "ನಿಮ್ಮ ತಿಪ್ಪೆ ಕಕ್ಕಸಗಳನ್ನೆಲ್ಲ ಸ್ವಚ್ಛಮಾಡುವೆನು"
ಆದ ಬಳಿಕ

ಮಟ್ಟು:— **खळमकरभयद** ರಾಗ ಬಾಗೇಸರಿ. ತಾಲ ತ್ರಿವಟ

ಬಳಿಯುವೆ ಕೊಳೆಯನು ಉಳಿಸದಂತೆ ನಾ ॥ ಭಂಗಿಜನಂಗಳಿಗಧಿಕವಾಗಿ
ನಾಂ ॥ಪಲ್ಲ॥
ಊರಬೀದಿಗಳ ನಿರಿಸುವೆ ನಿರ್ಮಲ । ಕಾರ್ಯವದೇ ಹೊಲತಿಯಾದ
ನನಗೆ ॥೧॥

ಪದ ೨೦ ಪುಟ ೭೧. ಸಾಲು ೪.

**ಮಾಧವ** — ಆ ಹೊಲೆಯನಾದ ಕಾಮನೇ ಕಾರಣನಲ್ಲವೆ? ಎಂದಬಳಿಕ

ಮಟ್ಟು:— हा गगनपति तमारि दिनकर ರಾಗ ಮಾಲಕಂಸ ತಾಲ ತ್ರಿವಟ

ಕಾನಧವು ಖಳ ಕುಮಾರ ಜನಿಸಿದ ॥ ವನಜನಾಭ ಸಿರಿಯುರ ಉದರದಿಂದ ॥ಪಲ್ಲ॥

ನೆನೆವರನ್ನು ಸಲಹುವರವನಾ , ಜನನೀ ಜನಿಕರು ಈ ತನುಹೀನಾ ॥

ನೆನೆಯುವವರ ಸರ್ವನಾಶ ಗೈವನು ॥೧॥

ಪದ ೨೧. ಫುಟ ೮೦. ಸಾಲು ೧೧

**ನಾಗಾಭಟ್ಟ**—ಬಂದ ಕೂಡಲೆ—

**ಮಟ್ಟು:**— ರಘುವೀರ ರಣಧೀರ. ರಾಗ ಕರ್ನಾಟಕ ಭೈರವಿ ತಾಲರೂಪಕ.

ಲಲನಾಮಣಿ ಹೃದಯಾ ॥ ತಿಳಿಯದು ನಿಃಸಂಶಯಾ ॥ ಪಲ್ಲ ॥
ಜಲಜಾಸನ ತಾನರಿಯನು । ಉಳಿದ ನರರ ಪಾಡೇನು ॥ ಅನುಪಲ್ಲ ॥
ತೋರಿಕೆಯಲಿತಾ ನಿರುವಳು । ಚಾರುಮೋಹಕ ರೂಪದವಳು ॥
ಭಾರಿಕಪಟವಂತರದೊಳು । ಮೀರಿತುಂಬಿದೆ ಗರಲದೊಲು ॥ ೧ ॥
ಮಾಯಕಾರ್ತಿ ನಡೆನುಡಿಯೊಳು । ನ್ಯಾಯನೀತಿಗಳ ನುಡಿವಳು
ಬಾಯಿಗೆ ಮಧುಸವರಿದ ವಿಷ । ದಾಯುತ ಕೊಡದಂದದಿಹಳು ॥ ೨ ॥

ಪದ ೨೨. ಫುಟ ೮೧, ಸಾಲು ೧೦.

**ನಾಗಾಭಟ್ಟ**—"ಬೇಟೆಯನ್ನಾಡದೆ ಹೋಗುವನೇ ಇಲ್ಲ" ಅಂದ ಬಳಿಕ

ಶೀಸಪದ್ಯ. ಜಿಂಜೋಟಿ ರಾಗ

ನಿಂಬೆವರ್ಣವ ನೋಡಿ । ನಂಬುವದು ನಮ್ಮವರ ।
ಹುಂಬತನವೆನಿಸದಿಹುದೆ ॥
ಇಂಬಿಸುವರವರ ಸವಿ । ತುಂಬಿದಂತಹ ನುಡಿಗೆ ।
ಸಂಭ್ರಮವ ತಾಳಿ ಮನದೆ ॥
ಯಾರಿಗಾದರು ಇವರ । ಕರದ ಆಂದೋಲನವು ।
ದೊರೆತುದಾದರೆ ತೀರಿತೊ ॥
ಹಿರಿಹಿರೀ ಹಿಗ್ಗಿ ಬಾ । ಯ್ದೆರೆದು ಪೌರುಷ ಕೊಚ್ಚು ।
ವರು ವರುಷ ವರುಷಗಳಲಿ ॥

ಧನ ಬೇಡಿದರೆ ಸಾಕು ! ಮನೆಮಾರು ಮಾರಿ ಹಣ
ವನು ಒದಗಿಸುವರವರಿಗೆ ॥
ಜನುಮದಾರಭ್ಯ ಬ್ರಾ । ಹ್ಮಣರಿಗೊಂದ್ಹರೆ ಕಾಸು
ದಾನ ಕೊಡದವರು ಸಹಿತಾ ॥ ೧ ॥

ಪದ ೨೩. ಪುಟ. ೯೫. ಸಾಲು. ೫.

ಮಾಧವರಾಯ—"ಆಹಾಹಾ ನೀನು ಶಾರದೆಯೋ? ದೇವೀ" ಅಂದನಂತರ

ರಾಗ ಭೈರವಿ ತಾಲತ್ರಿವಟ

ಕ್ಷಮೆಯನು ಪಾಲಿಸೆ ಪಾಮರಗೆ ॥ ವಿಮಲೆಯೆ ಕೋಮಲೆಯೇ ॥ ಪಲ್ಲ ॥
ಮೋಸಮಾಡಿ ನಾನಿತ್ತೆಸು ನಿನಗೆ । ಕ್ಲೇಶವನಸದಳ ಸಹಿಸುವದಾಗೆ ॥
ಏಸು ದಿನಗಳನು ಕಳೆದೆಯೆ ಸಖಿಯೇ । ಭೀಷಣ ಕಷ್ಟಕೆ ನೀಗುರಿ
ಯಾಗೆ ॥ ೧ ॥